ಡಾ|| ಎಂ. ಎಸ್. ಕೃಷ್ಣಮೂರ್ತಿ

# ವಿದ್ಯಾಪತಿ




ಪ್ರಚಾರ ಪುಸ್ತಕಮಾಲೆ—೧೭೧
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
೧೯೭೦.

ಪ್ರಚಾರ ಪುಸ್ತಕಮಾಲೆ–೧೭೧

# ವಿದ್ಯಾಪತಿ

ಡಾ॥ ಎಂ. ಎಸ್. ಕೃಷ್ಣಮೂರ್ತಿ.



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೦

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ, ವಿಶ್ವವಿದ್ಯಾನಿಲಯದ ವಿದ್ಯೆ, ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿಸಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿಪ್ರಸಾರ ಕಾರ್ಯವನ್ನು ಬಹಳ ಸಮರ್ಪಕ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿ

ವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದ ವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲೆಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾ ಮತ್ತು ಇತರರಿಗೂ ಆನಂದವನ್ನು ಉಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಲನ್ನು ಹತ್ತಲು ಅವಕಾಶವಿಲ್ಲದವ ರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ, ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯವಾಗುತ್ತವೆ; ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ. ಜನರಲ್ಲಿ ಜ್ಞಾನೋದಯ ವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆ ಯನ್ನು ಹೋಗಲಾಡಿಸಿ ವಿಶಾಲಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು ಓದಿ ತಿಳಿವಳಿಕೆ ಪಡೆ ಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಅಚ್ಚಿನಮನೆ

ಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದು ತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತ ವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯುಗಳನ್ನು ಕುರಿತು ನೂರಎಪ್ಪತ್ತು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಎಂ. ಎಸ್. ಕೃಷ್ಣಮೂರ್ತಿಯವರ 'ವಿದ್ಯಾಪತಿ' ಹೆಚ್ಚು ಜನಪ್ರಿಯ ವಾಗಲೆಂದು ನಾನು ಆಶಿಸುತ್ತೇನೆ.

ಮೈಸೂರು.

ದೇ. ಜವರೇಗೌಡ
ಉಪಕುಲಪತಿ.

# ಪರಿವಿಡಿ

# ವಿದ್ಯಾಪತಿ

**ಪರಿಚಯ**

ಭರತ ವರ್ಷದ ಸಾಂಸ್ಕೃತಿಕ ಇತಿಹಾಸದಲ್ಲಿ ಮಿಥಿಲೆಗೆ ಮಿಗಿಲಾದ ಸ್ಥಾನವಿದೆ. ರಾಜರ್ಷಿ ಜನಕ, ಆದರ್ಶಸತಿ ಸೀತೆ, ಮನುಕುಲದ ಇತಿಹಾಸದಲ್ಲಿ ಮೊದಲ ಬಾರಿಗೆ ಯುದ್ಧವನ್ನೇ ತೊಡೆದು ಹಾಕಿದ ಪ್ರಿಯದರ್ಶಿ ಅಶೋಕ, ಸುವರ್ಣ ಯುಗ ವನ್ನು ಸಾರಿದ ಗುಪ್ತರು ಇವರೆಲ್ಲರನ್ನೂ ಭಾರತಕ್ಕೆ ನೀಡಿದ ಶ್ರೇಯಸ್ಸು ಈ ನಾಡಿನದು. ಸಿದ್ಧಾರ್ಥನಿಗೆ ಬೋಧಿಯನ್ನು ನೀಡಿ ಅವನನ್ನು ಬುದ್ಧನನ್ನಾಗಿ ಮಾಡಿದ ಧನ್ಯ ನಾಡು ಮಿಥಿಲೆ. ಇಂಥ ನಾಡಿನ ನಾಡಿಯನ್ನು ಮಿಡಿದು ರಾಧಾಮಾಧವರ ಪ್ರೇಮದ ಆನಂದ ಮಂದಾಕಿನಿಯನ್ನು ಹರಿಸಿದ ಮಗಧದ ಮಾಗಧ ಕವಿ ವಿದ್ಯಾಪತಿ. ಮಿಥಿಲೆಯಲ್ಲಿ ರಾಧಾಕೃಷ್ಣರ ಪ್ರೇಮದ ವಸಂತಗಾಯನ ಮಾಡಿದ ಕವಿಕೋಕಿಲೆ ವಿದ್ಯಾಪತಿ. ನಾದ ನಿಧಿಯಾದ ಜಯದೇವ ದೇವವಾಣಿಯಲ್ಲಿ ರಾಧಾಕೃಷ್ಣರ ಪ್ರೇಮದ ಪೀಯೂಷಪ್ರವಾಹವನ್ನೇ ಹರಿಸಿದ. ಅವನ ತರುವಾಯ ಕೃಷ್ಣಪ್ರೇಮದ ಕೊಳಲು ಮಿಥಿಲೆಯ ಮಾಮರ ಗಳಲ್ಲಿ ಮೊಳಗಿತು. ಲೋಕವಾಣಿ ಮೈಥಿಲಿ ಭಾಷೆಯಲ್ಲಿ ಅಂಥದೇ ಸ್ವರ ಮಾಧುರಿಯನ್ನು ತುಂಬಿ ಮಾಯಾಕಿನ್ನರಿಯನ್ನು ಮಿಡಿದು 'ಅಭಿನವ ಜಯದೇವ,' 'ಮೈಥಿಲ ಕೋಕಿಲೆ' ಎಂದು ಪರಿಕೀರ್ತಿತನಾದ ಮಾಯಕಾರ ಕವಿ ವಿದ್ಯಾಪತಿ. ಮಾಗಧೀ ಪ್ರಾಕೃತದಿಂದ ಜನಿಸಿದ ಮೈಥಿಲೀ ಭಾಷೆ ಬಂಗಾಳಿ ಮತ್ತು

ಹಿಂದಿ ಈ ಎರಡಕ್ಕೂ ನಡುವಣ ಭಾಷೆ. ಈ ಎರಡು ಭಾಷೆಗಳ ಲಕ್ಷಣಗಳೂ ಅದರಲ್ಲಿ ದೊರೆಯುತ್ತದೆ. ಹೀಗಾಗಿ ಇಂಥ ಮಹಾಕವಿಯನ್ನು 'ತನ್ನವನು' ಎಂದು ಹೇಳಿಕೊಳ್ಳಲು ಈ ಎರಡು ಭಾಷೆಗಳಲ್ಲೂ ಮೇಲಾಟ ನಡೆದಿದೆ. ಬಂಗಾಳಿಗಳು ವಿದ್ಯಾಪತಿಯ ಭಾಷೆ ಬಂಗಾಳಿ ಎಂದು ಸಾಧಿಸಿದರೆ ಹಿಂದಿಯ ಜನತೆ ಆತನನ್ನು ತನ್ನ ಕಾವ್ಯಮಂದಿರದ ಉನ್ನತಾಸನದಲ್ಲಿ ಕುಳ್ಳಿರಿಸಿ ಆತನಿಗೆ ವಿಭೂತಿಪೂಜೆ ಸಲ್ಲಿಸಿದೆ. ಇದರಿಂದ ವಿದ್ಯಾಪತಿಯ ಜನಪ್ರಿಯತೆಯ ಅರಿವಾಗುತ್ತದೆ. ಮೈಥಿಲಿ ಹಿಂದಿಯ ಉಪಭಾಷೆಗಳಲ್ಲೊಂದು ಎಂದು ವಿದ್ವಾಂಸರು ಪರಿಗಣಿಸಿದ್ದಾರೆ. ಅದರ ಶಬ್ದ ಭಂಡಾರವೆಲ್ಲ ಹಿಂದಿಯದೇ. ಮೈಥಿಲಿಯನ್ನು ಸ್ವತಂತ್ರ ಭಾಷೆಯೆಂದು ಪರಿಗಣಿಸಬೇಕೆಂದು ಚಳುವಳಿ ನಡೆದದ್ದುಂಟು. ಅದೇನಾದರೂ ಆಗಲಿ ಹಿಂದಿ ಮತ್ತು ಮೈಥಿಲಿಯ ಗೋತ್ರ ಒಂದೆ ಎಂಬುದನ್ನು ನೆನಪಿಟ್ಟು ಕೊಂಡರೆ ಸಾಕು. ೧೯೬೫ ರಲ್ಲಿ ವಿದ್ಯಾಪತಿಯ ಆರನೆಯ ಶತಮಾನೋತ್ಸವವನ್ನು ಭಾರತಾದ್ಯಂತ ವೈಭವದಿಂದ ಆಚರಿಸ ಲಾಯಿತು.

ವಿದ್ಯಾಪತಿಯ ಜನ್ಮಭೂಮಿಯಾದ ಮಿಥಿಲೆಗೂ ಕನ್ನಡ ನಾಡಿಗೂ ನಂಟುಂಟು. ಮಿಥಿಲೆಯಲ್ಲಿ ಆಳಿದ ನಾನ್ಯದೇವನ ವಂಶದ ರಾಜರು ಕರ್ಣಾಟಕದ ಅರಸರು. ಅವರು ಕಟ್ಟಿಸಿದ ಕೆರೆಗಳು ಇಂದಿಗೂ ಅಲ್ಲಿ ಇವೆ. ಈ ರಾಜರ ಪ್ರಭಾವದಿಂದಲೋ ಏನೋ ಅಲ್ಲಿ 'ಹರಿಹರ' ಭಕ್ತಿ ಪ್ರಚಾರಕ್ಕೆ ಬಂದಿತು. ಈ ರಾಜರು ಹರಿಹರೋಪಾಸಕರು. ವಿದ್ಯಾಪತಿಯ ಪೂರ್ವ

ಜರು ಕರ್ಣಾಟಕವಂಶದರಾಜರ ಬಳಿ ಮಂತ್ರಿ, ಸಂಧಿವಿಗ್ರಹಿಯಾಗಿದ್ದರು. ವಿದ್ಯಾಪತಿ ತಿರಹುತ್ತಿನ ರಾಜರಾದ ಕೀರ್ತಿಸಿಂಹ, ಶಿವಸಿಂಹರ ಆಸ್ಥಾನ ಕವಿಯಾಗಿದ್ದ. ಈ ಅರಸರೂ ಹರಿಹರೋಪಾಸಕರಾಗಿದ್ದಿರಬೇಕು. ಕವಿ ಸ್ವತಃ ಹರಿಹರೋಪಾಸಕ. ' ಹರಿಹರ ' ದೈವತದ ಕಲ್ಪನೆ ಕನ್ನಡನಾಡಿನ ಕೊಡಿಗೆ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇದು ನಿಜವಾದರೆ ವಿದ್ಯಾಪತಿಯ ಭಕ್ತಿ ಭಾಗೀರಥಿಯಲ್ಲಿ ಕನ್ನಡದ ಕಾವೇರಿಯೂ ಬೆರೆತಂತಾಗುತ್ತದೆ.

ಕ್ರಿ.ಶ. ೧೦೦೦ದಿಂದ ೧೨೦೦ರವರೆಗಿನ ಭಾರತೀಯ ಸಾಹಿತ್ಯ ನಾನಾ ವಿಧವಾದ ಪರಸ್ಪರ ವಿರುದ್ಧ ಧಾರೆಗಳ ಸಂಗಮ ಸ್ಥಳವಾಗಿತ್ತು. ವಿದೇಶೀ ಆಕ್ರಮಣ ಭಾರತೀಯರ ಜನ ಜೀವನವನ್ನೇ ಆಲ್ಲೋಲಕಲ್ಲೋಲಗೊಳಿಸಿತ್ತು. ಸಾಮಂತವಾದೀ ಸಂಸ್ಕೃತಿ ಇದನ್ನು ಎದುರಿಸಲಾರದಷ್ಟು ಜೀರ್ಣ ಜರ್ಜರವಾಗಿತ್ತು. ಸ್ಥಾಪತ್ಯ, ಚಿತ್ರಕಲೆ, ಸಾಹಿತ್ಯ, ಸಂಗೀತ ಮೊದಲಾದವುಗಳಲ್ಲಿ ಚಮತ್ಕಾರ, ಬಾಹ್ಯಾಡಂಬರಗಳು ತಾವೇ ತಾವಾದವು. ಸಾಹಿತಿ ದ್ರಷ್ಟಾರನಾಗದೆ ರಾಜ ರಾಣಿಯರ, ಸಾಮಂತ, ಶ್ರೀಮಂತರ, ವಿಲಾಸ ಲಾಲಸೆಯನ್ನು ಕೆರಳಿಸುವ ರಾಸಾಯನಿಕನಾಗಿ ಹೋಗಿದ್ದ. ಧರ್ಮ, ದರ್ಶನಗಳಲ್ಲಿ ತಂತ್ರ, ಮಾಟ, ಮದ್ದು ಮತ್ತು ಗುಹ್ಯಸಾಧನೆಗಳು ಪ್ರಧಾನವಾದವು. ಇಂಥ ಪರಿಸ್ಥಿತಿಯಲ್ಲಿ ದಕ್ಷಿಣದಿಂದ ಭಕ್ತಿಭಾಗೀರಥಿ ಉತ್ತರಕ್ಕೆ ಹರಿಯಿತು. ಭಕ್ತಿಆಂದೋಳನ ಜನಾಂದೋಳನವಾಗಿ ನಮ್ಮ

ಸಂಸ್ಕೃತಿಯನ್ನು ಪುನರುಜ್ಜೀವಿಸಲು ತಲೆದೋರಿತು. ಇದು ಸಾಮಂತರ, ಆಳರಸರ ಪ್ರೋತ್ಸಾಹಕ್ಕೆ ಕೈಚಾಚಲಿಲ್ಲ. ವಿಶಾಲ ಜನಸಮೂಹದ ರಕ್ಷಣೆ, ಪೋಷಣೆ ಇದಕ್ಕೆ ದೊರೆಯಿತು. ಇದರ ಪರಿಣಾಮವಾಗಿ ಉತ್ತರ ಭಾರತದಲ್ಲಿ ಜನಜಾಗೃತಿಯುಂಟಾಯಿತು.

ಈ ಹೊತ್ತಿಗೆ ಹಿಂದಿಯಲ್ಲಿ ವೀರಯುಗ ನಡೆಯುತ್ತಿತ್ತು. ಈ ವೀರಗಾಥಾಕಾಲ(ಕ್ರಿ.ಶ. 993–1318)ದಲ್ಲಿ ಚಂದ ಬರದಾಯಿ ಮೊದಲಾದ ವೀರಕವಿಗಳು ವೀರರಸಸ್ಯಂದಿಯಾದ 'ರಾಸೋ' ಎಂಬ ಕಾವ್ಯಗಳನ್ನು ರಚಿಸಿ ಜನರ ಪೌರುಷವನ್ನು ಉತ್ತೇಜಿಸಿದ್ದರು. ಈ ವೀರಗಾಥಾ ಕಾವ್ಯಗಳಲ್ಲಿ ಕೂಡ ಶೃಂಗಾರ ತಲೆದೋರಿತ್ತು. ನಿಜವಾದ ಕಾರಣಗಳಿಂದ ಯುದ್ಧ ಕೈಗಟ್ಟಿದ್ದರೂ ಕೂಡ ಈ ಕವಿಗಳು ಆ ಕಾರಣಗಳನ್ನು ಉಲ್ಲೇಖಿಸದೆ ಯಾವುದೋ ಸುಂದರಿಯನ್ನು ಆ ಯುದ್ಧಕ್ಕೆ ಕಾರಣವಾಗಿ ಚಿತ್ರಿಸುತ್ತಿದ್ದರು. ಈ ರೀತಿ ಶೃಂಗಾರ ಇಲ್ಲೆಲ್ಲ ವೀರಕ್ಕೆ ಪೋಷಕವಾಗಿ ಬರುತ್ತದೆ. ಶೃಂಗಾರ ಸತ್ಯಕ್ಕೆ ಇಲ್ಲಿ ಮಾರಕವಾಗಿ ಪರಿಣಮಿಸಿತ್ತು. ಆದರೆ ಶೃಂಗಾರ ಮತ್ತು ವೀರ ಇವೆರಡನ್ನೂ ಬೇರೆ ಬೇರೆಯಾಗಿ ಸ್ವತಂತ್ರವಾಗಿ ಚಿತ್ರಿಸಿ ತಮ್ಮ ಸತ್ಯನಿಷ್ಠೆಯನ್ನು ಮೆರೆದ ಕವಿಗಳು ಈ ಯುಗದಲ್ಲಿ ವಿರಳ. ಇಂಥ ವಿರಳ ಕವಿಗಳಲ್ಲಿ ವಿದ್ಯಾಪತಿ ಅಗ್ರಗಣ್ಯ. ಒಂದು ದೃಷ್ಟಿಯಲ್ಲಿ ನೋಡಿದರೆ ಈತ ಯುಗಸಂಧಿಯ ಕವಿ. ಆತನ ಕಾಲಕ್ಕಾಗಲೇ ವೀರಯುಗ ಕಳೆದು ಭಕ್ತಿಯುಗದ ಮುಂಜಾವು ಮೂಡಿತ್ತು. ಈ ಸಂಕ್ರಮಣ ಯುಗದಲ್ಲಿ ಹಳತು ಹೊಸತುಗಳು ದ್ವಂದ್ವ

ಅನಿವಾರ್ಯ. ವೀರ, ಭಕ್ತಿಗಳ ನಡುವೆ ಮುಂಚಿನಿಂದಲೇ ಸಾಗಿ ಬಂದಿದ್ದ ಶೃಂಗಾರವೂ ಸೇರಿಕೊಂಡಿತ್ತು. ಈ ಮೂರರ ತ್ರಿವೇಣಿಯ ತಡಿಯಲ್ಲಿ ನಿಂತು ತನ್ನ ಪ್ರತಿಭೆಯ ಪ್ರಭೆಯನ್ನು ದಿಗಂತ ವಿಶಾಂತಗೊಳಿಸಿದ ಕವಿ ವಿದ್ಯಾಪತಿ.

## ಬದುಕು, ದೇಶ, ಕಾಲ

ವಿದ್ಯಾಪತಿಯ ನಿವಾಸಸ್ಥಾನ ಮಿಥಿಲೆಯ ದರ್ಭಂಗಾ ಜಿಲ್ಲೆಯ ವಿಸಪಿ ಅಥವಾ ಗಢವಿಸಪಿ ಎಂಬ ಗ್ರಾಮ. ಇದು ದರ್ಭಂಗಾ ಜಿಲ್ಲೆಯ ಕಮತೌಲ್ ಸ್ಟೇಷನಿಂದ ನಾಲ್ಕುಮೈಲಿ ದೂರದಲ್ಲಿದೆ. ಈ ಊರಿನಲ್ಲೇ ಆತನ ವಂಶಿಕರು ಬಹಳ ಹಿಂದಿನಿಂದಲೂ ವಾಸಿಸುತ್ತಿದ್ದರು. ಡಾ. ಸುನೀತಿಕುಮಾರ ಚಟರ್ಜಿಯವರು ವಿದ್ಯಾಪತಿಯ ವಂಶವೃಕ್ಷವನ್ನು ಈ ರೀತಿ ಗುರುತಿಸಿದ್ದಾರೆ :



ವಿದ್ಯಾಪತಿಯ ವಂಶದ ಮೂಲಪುರುಷ ವಿಷ್ಣುಠಕ್ಕುರ ಎಂಬಾತ. ಆದರೆ ಆತನ ವಂಶ ವಿಖ್ಯಾತವಾಗಿದ್ದು ವಿದ್ಯಾಪತಿಯ ಮುತ್ತಾತನಾದ ದೇವಾದಿತ್ಯ ಸಾಂಧಿವಿಗ್ರಹಕನ ಕಾಲದಿಂದ. ಈತ ಮಿಥಿಲೆಯಲ್ಲಿ ನಾನ್ಯದೇವ ಸ್ಥಾಪಿಸಿದ 'ಕರ್ಣಾಟಕ ಸಾಮ್ರಾಜ್ಯ'ದ ಸಂಧಿವಿಗ್ರಹಿ. ಕನ್ನಡ ನಾಡಿನಂತೆಯೇ ಮಿಥಿಲೆಯಲ್ಲೂ ಕೂಡ ಈ ಪದವಿ ರಾಜ್ಯದ ಅತ್ಯುನ್ನತ ಅಧಿಕಾರ ಗಳಲ್ಲೊಂದಾಗಿತ್ತು. ಆದ್ದರಿಂದ ಮುಂದೆ ಈ ವಂಶದಲ್ಲಿ ಹುಟ್ಟಿದವರೆಲ್ಲ ತಾವು ಸಂಧಿವಿಗ್ರಹಿಯಾಗಿದ್ದ ದೇವಾದಿತ್ಯನ ವಂಶದವರು "ದೇವಾದಿತ್ಯ ಕುಲೋದ್ಭವ:" ಎಂದು ಹೆಮ್ಮೆ ಯಿಂದ ಹೇಳಿಕೊಂಡಿದ್ದಾರೆ.

ಮಿಥಿಲೆ ಮಧ್ಯಯುಗದ ಸುಪ್ರಸಿದ್ಧ ಜ್ಞಾನಪೀಠಗಳ ಲ್ಲೊಂದಾಗಿತ್ತು. ಆದರಲ್ಲೂ ನ್ಯಾಯದರ್ಶನಕ್ಕೆ ಅದು ಎತ್ತಿದ ಕೈ. ಅಲ್ಲಿಗೆ ವಿದ್ಯಾರ್ಜನೆಗಾಗಿ ಬಂಗಾಳ, ಒರಿಸ್ಸಾ ಮೊದಲಾದ ದೇಶಗಳಿಂದ ಜನ ಬರುತ್ತಿದ್ದರು. ಇಂಥ ವಿಖ್ಯಾತ ಜ್ಞಾನ ಪೀಠದಲ್ಲಿ ಹುಟ್ಟಿದ ವಿದ್ಯಾಪತಿಯ ಮನೆತನ ಕೂಡ ವಿದ್ಯೆಗೆ ಹೆಸರಾದುದು. ಈ ವಂಶದಲ್ಲಿ ಸರಸ್ವತೀ ಉಪಾಸನೆ ಮೊದಲಿನಿಂದ ನಡೆದುಬಂದಿತ್ತು. ವಿದ್ಯಾಪತಿಯ ಅಜ್ಜ ಜಯದತ್ತನ ಚಿಕ್ಕಪ್ಪನ ಮಗ ಜ್ಯೋತಿರೀಶ್ವರ ಕವಿಶೇಖರಾಚಾರ್ಯ ಸಂಸ್ಕೃತ ದಲ್ಲಿ 'ಪಂಚಸಾಯಕ' 'ಧೂರ್ತಸಮಾಗಮ' ಮತ್ತು 'ರಂಗಶೇಖರ' ಎಂಬ ಗ್ರಂಥಗಳನ್ನು ಮತ್ತು ಮೈಥಿಲಿಯಲ್ಲಿ 'ವರ್ಣರತ್ನಾಕರ' ಎಂಬ ಗ್ರಂಥವನ್ನೂ ರಚಿಸಿದ್ದಾನೆ. ವಿದ್ಯಾಪತಿಯ ಮತ್ತೊಬ್ಬ ಪೂರ್ವಜನಾದ ವೀರೇಶ್ವರ ಠಾಕೂರ

ಛಾಂದೋಗ್ಯ ದಶಕರ್ಮಪದ್ಧತಿ' ಎಂಬ ಗ್ರಂಥವನ್ನು ರಚಿಸಿದ್ದಾನೆ. ವೀರೇಶ್ವರನ ತಮ್ಮ ವಿದ್ಯಾಪತಿಯ ಮುತ್ತಜ್ಜ 'ಮಹಾವಾರ್ತಿಕ ನೈಬಂಧಿಕ' ಎಂದು ಪ್ರಸಿದ್ಧರಾಗಿದ್ದರು. ಆತನ ಮಗ ಚಂಡೇಶ್ವರ 'ವಿವಾಹ ರತ್ನಾಕರ' 'ರಾಜನೀತಿ ರತ್ನಾಕರ' ಮೊದಲಾದ ಏಳು 'ರತ್ನಾಕರ' ಗ್ರಂಥಗಳನ್ನು ರಚಿಸಿದ್ದಾನೆ. ಈತ ಮೈಥಿಲ ಬ್ರಾಹ್ಮಣರ ದಿನಚರ್ಯೆಗಾಗಿ ನಿಯಮಗಳನ್ನು ಮಾಡಿದ್ದ. ವಿದ್ಯಾಪತಿಯ ತಂದೆ ಗಣಪತಿ ಠಕ್ಕುರ ಕೀರ್ತಿಸಿಂಹನ ತಂದೆ ಗಣೇಶ್ವರನ ಆಸ್ಥಾನ ವಿದ್ವಾಂಸ ಹಾಗೂ ಮಂತ್ರಿಯಾಗಿದ್ದ. ಆತ 'ಗಂಗಾಭಕ್ತಿ ತರಂಗಿಣಿ' ಎಂಬ ಗ್ರಂಥವನ್ನು ರಚಿಸಿದ್ದಾನೆ. ಇಂಥ ವಂಶದಲ್ಲಿ ಹುಟ್ಟಿದ ಕವಿ ನಿಜವಾದ ಅರ್ಥದಲ್ಲಿ ವಿದ್ಯಾಪತಿಯಾದ.

ವಿದ್ಯಾಪತಿ ಸಂಸ್ಕೃತವನ್ನು ತನ್ನ ತಂದೆ ಮತ್ತು ಹರಿಮಿಶ್ರರಿಂದ ಕಲಿತ. ಹರಿಮಿಶ್ರನ ಅಣ್ಣನ ಮಗ ವಿಖ್ಯಾತ ನೈಯಾಯಿಕ ಪಂಡಿತ ಪಕ್ಷಧರ ಮಿಶ್ರ ವಿದ್ಯಾಪತಿಯ ಸಹಪಾಠಿ. ಗಣಪತಿ ಠಕ್ಕುರ ಕಾಶ್ಯಪ ಗೋತ್ರದ ಶ್ರೋತ್ರಿಯ ಮೈಥಿಲ ಬ್ರಾಹ್ಮಣ. ಈ ರೀತಿ ವಿದ್ಯೆ, ಸಂಸ್ಕಾರಗಳು ಆತನಿಗೆ ರಕ್ತಗತವಾಗಿದ್ದವು. ವಾತಾವರಣ ಆತನ ಸಂಸ್ಕಾರವನ್ನು ಇನ್ನೂ ಪುಟಗೊಳಿಸಿತು. ಇಷ್ಟಾದರೂ ವಿದ್ಯಾಪತಿ ತರ್ಕ ಕರ್ಕಶನಾಗಲಿಲ್ಲ. ಆತನ ಮನೆತನಕ್ಕೆ ಲಕ್ಷ್ಮಿ ಸರಸ್ವತಿಯರಿಬ್ಬರೂ ಒಲಿದಿದ್ದರು. ಆದರೂ ವಿದ್ಯಾಪತಿ ಲೋಕ ಜೀವನದಿಂದ ದೂರವಿರಲಿಲ್ಲ. ಅವನ ವ್ಯಕ್ತಿತ್ವ ಹಲವು ವಿಧವಾದ ಪರಸ್ಪರ ವಿರುದ್ಧ ವಿಚಾರಧಾರೆಗಳ ಸ್ತಬಕ. ಆತ ಸಂಕ್ರಮಣ

ಯುಗದ ಪ್ರತಿನಿಧಿ ಕವಿ. ದರಬಾರೀ ಕವಿಯಾದರೂ ಆತ ಜನಕವಿ. ಶೃಂಗಾರಿಯಾದರೂ ಭಕ್ತ, ಆಸ್ತಿಕನಾದರೂ ಧರ್ಮ ನಿರಪೇಕ್ಷ. ಸಂಸ್ಕೃತದಲ್ಲಿ ಪ್ರಕಾಂಡಪಂಡಿತನಾದರೂ ಲೋಕ ವಾಣಿಯ ಅನನ್ಯ ಪೂಜಾರಿ. ಸಂಸ್ಕಾರೀ ಬ್ರಾಹ್ಮಣನಾದರೂ ಮಡಿವಂತನಲ್ಲ.

ವಿದ್ಯಾಪತಿಯ ತಾಯಿ ' ಹಾಂಸಿನೀದೇವಿ '. ಆಕೆ ಮಕ್ಕಳಿಲ್ಲದೆ ಕಪಿಲೇಶ್ವರನನ್ನು ಪೂಜಿಸಿ ಈತನನ್ನು ಪಡೆದಳಂತೆ. ವಿದ್ಯಾಪತಿಯ ಮಗ ಹರಪತಿ, ಮಗಳು ದುಲಹೀ. ಆತನ ಸೊಸೆ ಚಂದ್ರಕಲಾ ಕೂಡ ಒಬ್ಬ ದೊಡ್ಡ ಕವಯಿತ್ರಿಯಾಗಿದ್ದಳು. ಆಕೆ ಬರೆದ ಕವಿತೆಗಳು ಧರಭಂಗದ ರಾಜಕವಿ ಲೋಚನ ಸಂಗ್ರಹಿಸಿದ ' ರಾಗತರಂಗಿಣಿ 'ಯಲ್ಲಿ ಸಂಗ್ರಹಗೊಂಡಿವೆ.

ವಿದ್ಯಾಪತಿಯ ಅಜ್ಜ ಜಯದತ್ತ ಸಂಸ್ಕೃತದಲ್ಲಿ ಶಿಖಾಂತ ಪಂಡಿತನಾಗಿದ್ದುದೇ ಅಲ್ಲದೆ ಒಬ್ಬ ದೊಡ್ಡ ಸಂತನಾಗಿದ್ದ. ಆತ ' ಯೋಗೇಶ್ವರ ' ಎಂದು ವಿಖ್ಯಾತನಾಗಿದ್ದ. ಆತನ ಹೆಸರಿನಲ್ಲಿ ದರಭಂಗಾ ಜಿಲ್ಲೆಯ ಮನೀಗಾಧಿಯ ಹತ್ತಿರ ಒಂದು ಮಠವಿದೆ.

ಭಾರತದ ಇತರ ಮುಖ್ಯ ಕವಿಗಳಂತೆ ವಿದ್ಯಾಪತಿಯ ಕಾಲ ಮತ್ತು ಕೃತಿಗಳ ವಿಷಯ ಇನ್ನೂ ವಾದಭೂಮಿಯ ವಿಷಯವಾಗಿಯೇ ಉಳಿದಿದೆ. ವಿದ್ವಾಂಸರ ಸಂಶೋಧನೆ, ಮಥನದ ಫಲವಾಗಿ ಕೆಲವು ನಿಷ್ಕರ್ಷಗಳು ಹೊರಬಿದ್ದಿವೆ. ಅವುಗಳಲ್ಲಿ ಯಾವುದನ್ನೂ ' ಇದಮಿತ್ಥಂ ' ಎಂದು ಹೇಳುವಹಾಗಿಲ್ಲ. ಆದರೂ ಜನಶ್ರುತಿ, ಶಾಸನ ಮೊದಲಾದವುಗಳ ಆಧಾರದ

ಮೇಲೆ ನಿರ್ಮಿತವಾದ ಚಾರಿತ್ರಿಕ ಅಂಶಗಳನ್ನು ಸ್ಥೂಲವಾಗಿ ಅಂಗೀಕರಿಸಬಹುದು.

ವಿದ್ಯಾಪತಿಗೂ ಮಿಥಿಲೆಯ ಅರಸು ಮನೆತನಕ್ಕೂ ನಿಕಟ ಸಂಬಂಧವಿದ್ದಿತು. ಆದ್ದರಿಂದ ಆತ ಪಂಪನಂತೆ ಒಬ್ಬ ಐತಿಹಾಸಿಕ ವ್ಯಕ್ತಿಯಾಗಿದ್ದಾನೆ. ಆದರೆ ವಿದ್ಯಾಪತಿ ಪಂಪನಂತೆ ಒಬ್ಬ ರಾಜನ ಬಳಿ ಇರಲಿಲ್ಲ. ಒಂದೇ ಮನೆತನದ ಹತ್ತು ಹನ್ನೆರಡು ಮಂದಿ ರಾಜರ ಆಶ್ರಯದಲ್ಲಿ ಅವನಿದ್ದ. ಹೀಗಾಗಿ ಅವನ ಕಾಲನಿರ್ಣಯ ಕೊಂಚ ತೊಡಕಾಗಿದೆ. ಕವಿ ಸ್ವತಃ ಎಲ್ಲೂ ತನ್ನ ಕಾಲವನ್ನು ಹೇಳಿಕೊಂಡಿಲ್ಲ. ಆದರೂ ಆತನ ಆಶ್ರಯದಾತರ ಕಾಲದ ಆಧಾರದ ಮೇಲೆ ಸ್ಥೂಲವಾಗಿ ವಿದ್ಯಾಪತಿಯ ಕಾಲನಿರ್ಣಯ ಮಾಡಬಹುದು.

ವಿದ್ಯಾಪತಿಯ ತಂದೆ ಗಣಪತಿ ಠಕ್ಕುರ್ ಮಿಥಿಲೆಯರಾಜ ಗಣೇಶ್ವರನ ಸಭಾಪಂಡಿತನಾಗಿದ್ದ. ಚಿಕ್ಕಂದಿನಲ್ಲಿ ವಿದ್ಯಾಪತಿ ತನ್ನ ತಂದೆಯೊಡನೆ ರಾಜನ ಆಸ್ಥಾನಕ್ಕೆ ಹೋಗಿಬರುತ್ತಿದ್ದ. ಆಗ ಆತ ಎಂಟು ಹತ್ತು ವರ್ಷ ವಯಸ್ಸಿನ ಹುಡುಗನಾಗಿರಬೇಕು. ವಿದ್ಯಾಪತಿಯ 'ಕೀರ್ತಿಲತಾ' ಗ್ರಂಥದ ಪ್ರಕಾರ ರಾಜಾ ಗಣೇಶ್ವರ ಲಕ್ಷ್ಮಣ ಶಕೆ ೨೫೨ರಲ್ಲಿ ಅಸಲಾನ್ ಎಂಬ ಸುಲ್ತಾನನಿಂದ ಕೊಲ್ಲಲ್ಪಟ್ಟ. ಈ ಆಧಾರದ ಮೇಲೆ ಹೇಳುವುದಾದರೆ ವಿದ್ಯಾಪತಿ ಆಗ ಹತ್ತು ವರ್ಷದ ಹುಡುಗನಾಗಿದ್ದ ಎಂದಿಟ್ಟುಕೊಂಡರೆ ಆತ ಲಕ್ಷ್ಮಣಾಬ್ದ ೨೪೨ರ ಸರಿ ಸುಮಾರಿನಲ್ಲಿ ಹುಟ್ಟಿದ ಎಂದು ಊಹಿಸಬಹುದು. ಶ್ರೀ ನಾಗೇಂದ್ರನಾಥ ಗುಪ್ತರು 'ವಿದ್ಯಾಪತಿ ಪದಾವಳಿಯ' ಬಂಗಾಳೀ ಸಂಸ್ಕರಣದ

ಭೂಮಿಕೆಯಲ್ಲಿ ಇದೇ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅವರ ಪ್ರಕಾರ ೨೪೩ ಲಕ್ಷ್ಮಣಾಬ್ದವನ್ನು ರಾಜಾ ಶಿವಸಿಂಹನ ಜನ್ಮ ಕಾಲ ಎಂದು ಒಪ್ಪಿಕೊಂಡರೆ (ಏಕೆಂದರೆ ತಂದೆ ಸತ್ತಾಗ ಶಿವಸಿಂಹ, ಕೀರ್ತಿಸಿಂಹರಿಬ್ಬರೂ ಚಿಕ್ಕ ಹುಡುಗರು) ವಿದ್ಯಾಪತಿಯ ಜನನ ಕಾಲ ಲಕ್ಷ್ಮಣಾಬ್ದ ೨೪೧ರ ಸರಿ ಸುಮಾರು ಎಂದು ಒಪ್ಪಿಕೊಳ್ಳಬಹುದು. ಏಕೆಂದರೆ ಶಿವಸಿಂಹ ತನ್ನ ಐವತ್ತನೇ ವರ್ಷದಲ್ಲಿ ಪಟ್ಟಕ್ಕೆ ಬಂದನೆಂದೂ ವಿದ್ಯಾಪತಿ ಆತನಿಗಿಂತ ಎರಡು ವರ್ಷ ದೊಡ್ಡವನೆಂದೂ ಜನಶ್ರುತಿಯಿದೆ. ಈ ಆಧಾರದ ಮೇಲೆ ಶ್ರೀ ನಾಗೇಂದ್ರನಾಥ ಗುಪ್ತರು ವಿದ್ಯಾಪತಿಯ ಜನನ ಲಕ್ಷ್ಮಣಾಬ್ದ ೨೪೧ ಎಂದರೆ ಕ್ರಿ.ಶ. ೧೩೬೦ ರಲ್ಲಿ ಆಯಿತೆಂದು ಹೇಳಿದ್ದಾರೆ.

ವಿದ್ಯಾಪತಿಯ ಜನ್ಮಕಾಲ ನಿರ್ಧಾರಕ್ಕೆ ಅಂತಸ್ಸಾಕ್ಷ್ಯವನ್ನೂ ನೋಡಬಹುದು. 'ಕೀರ್ತಿಲತಾ' ಗ್ರಂಥದಿಂದ ಅದು ವಿದ್ಯಾಪತಿಯ ಪ್ರಾರಂಭಿಕ ಕೃತಿಯಿರಬೇಕೆನಿಸುತ್ತದೆ. ವಿದ್ಯಾಪತಿ ಈ ಗ್ರಂಥದಲ್ಲಿ ತನ್ನ ಕವಿತೆ ಬಾಲಚಂದ್ರನಂತೆ ಎಂದು ಹೇಳಿ ಅದಕ್ಕೆ ದುರ್ಜನರ ಅಪಹಾಸ್ಯ ತಟ್ಟದೆಂದು ಹೇಳಿಕೊಂಡಿದ್ದಾನೆ. ಅದೂ ಅಲ್ಲದೆ ಇದೇ ಗ್ರಂಥದಲ್ಲಿ ಕವಿ ತನ್ನನ್ನು 'ಖೇಲನ ಕವಿ' ಎಂದು ಕರೆದುಕೊಂಡಿದ್ದಾನೆ. ಎಂದರೆ ಅವನ ಇನ್ನೂ ಚಿಕ್ಕ ವಯಸ್ಸಿನ ವ್ಯಕ್ತಿಯಾಗಿದ್ದಿರಬಹುದು.

ಇದರಿಂದ ವಿದ್ಯಾಪತಿಯ ಯಾವ ಮಹತ್ವದ ಕೃತಿಯೂ ಈ ಹಿಂದೆ ಬೆಳಕಿಗೆ ಬಂದಿರಲಿಲ್ಲವೆಂದು ಕಾಣುತ್ತದೆ. ಈ

ಮಾತಿನಲ್ಲಿ ಕವಿಯ ತಾರುಣ್ಯದ ಹುಮ್ಮಸ್ಸು, ಆತ್ಮವಿಶ್ವಾಸ ಪ್ರಕಟವಾಗುತ್ತದೆ.

ಈಗ 'ಕೀರ್ತಿಲತಾ'ದ ಕಾಲನಿರ್ಣಯವಾದರೆ ವಿದ್ಯಾಪತಿಯ ಕಾಲ ನಿರ್ಣಯವಾದಂತೆಯೇ. ಕೀರ್ತಿಲತಾ ಕೀರ್ತಿಸಿಂಹ ಮಹಾರಾಜನ ಕೀರ್ತಿಗಾನದ ಕೃತಿ. ಈ ಕೃತಿಯಲ್ಲಿ ಎರಡು ಐತಿಹಾಸಿಕ ಘಟನೆಗಳು ಬರುತ್ತವೆ. ಒಂದು ಅಸಲಾನನಿಂದ ನಡೆದ ಗಣೇಶ್ವರ ಮಹಾರಾಜನ ವಧೆ. ಎರಡನೆಯದು ಜೌನಪುರದ ಸುಲ್ತಾನ ಇಬ್ರಾಹಿಂಶಾಹನ ಸಹಾಯದಿಂದ ಕೀರ್ತಿಸಿಂಹ ತಿರಹುತ್ತ ರಾಜ್ಯವನ್ನು ಗೆದ್ದುದು.

ಶಿವಸಿಂಹನ ತಂದೆ ದೇವಸಿಂಹನ ಸಾವನ್ನು ಕುರಿತು ಬರೆದ ವಿದ್ಯಾಪತಿಯ ಒಂದು ಪದ್ಯ ತುಂಬ ಪ್ರಸಿದ್ಧವಾಗಿದೆ.

ಇದರಂತೆ ಲಕ್ಷ್ಮಣಾಬ್ದ ೨೯೩ ರಲ್ಲಿ ದೇವಸಿಂಹ ಸ್ವರ್ಗಸ್ಥನಾದನೆಂದೂ ಮತ್ತು ಅದೇ ವರ್ಷ ಶಿವಸಿಂಹ ಸಿಂಹಾಸನವನ್ನೇರಿದನೆಂದೂ ಸ್ಪಷ್ಟವಾಗುತ್ತದೆ. (ಬಂಗಾಳದ ರಾಜಾ ಲಕ್ಷ್ಮಣ ಸೇನ ಕ್ರಿ. ಶ. ೧೧೧೯ರಲ್ಲಿ ಸಿಂಹಾಸನವೇರಿದ. ಅಂದಿನಿಂದ ಅವನ ಶಕೆ ಆರಂಭವಾಗುತ್ತದೆ) ಆಗ ಶಿವಸಿಂಹನಿಗೆ ಐವತ್ತು ವರ್ಷವಾಗಿತ್ತೆಂದೂ, ವಿದ್ಯಾಪತಿ ಆತನಿಗಿಂತ ಎರಡು ವರ್ಷ ದೊಡ್ಡವನೆಂಬ ಜನಶ್ರುತಿಯನ್ನನುಸರಿಸಿದರೆ ವಿದ್ಯಾಪತಿ ಲಕ್ಷ್ಮಣಾಬ್ದ ೨೪೧ರಲ್ಲಿ ಹುಟ್ಟಿರಬೇಕೆಂಬ ಅಂಶ ಸ್ಪಷ್ಟವಾಗುತ್ತದೆ ಶಿವಸಿಂಹ ಪಟ್ಟಕ್ಕೆ ಬಂದ ಮೂರುವರ್ಷಕ್ಕೇ ಎಂದರೆ ಲಕ್ಷ್ಮಣಾಬ್ದ ೨೯೬ರಲ್ಲಿ ಮುಸಲ್ಮಾನ ಸೇನೆ ಅವನ ರಾಜ್ಯದ

ಮೇಲೆ ಧಾಳಿ ನಡೆಸಿತು. ಆತ ಯುದ್ಧಭೂಮಿಗೆ ಹೋದವನು ಮತ್ತೆ ಮರಳಿ ಮನೆಗೆ ಬರಲಿಲ್ಲ. ಆಗ ವಿದ್ಯಾಪತಿ ಆತನ ಪತ್ನಿ ಲಖಿಮಾದೇವಿಯೊಡನೆ ರಾಜಬಿನೌಲಿ ಎಂಬಲ್ಲಿಗೆ ಹೋದ. ಅಲ್ಲಿ ಲಕ್ಷ್ಮಣಾಬ್ದ ೨೯೯ರಲ್ಲಿ ಪೌರಾದಿತ್ಯ ಎಂಬ ರಾಜನಿಗಾಗಿ 'ಲಿಖನಾವಲಿ' ಎಂಬ ಗ್ರಂಥವನ್ನು ಬರೆದುಕೊಟ್ಟ, ಅಲ್ಲೇ ೩೦೯ರಲ್ಲಿ 'ಭಾಗವತ'ದ ಒಂದು ಪ್ರತಿಯನ್ನು ಬರೆದೂ ಮುಗಿಸಿದ. ಆದ್ದರಿಂದ ೩೦೯ರವರೆಗೆ ಎಂದರೆ ಅರವತ್ತೊಂಭತ್ತು ವರ್ಷ ವಯಸ್ಸಿನವರೆಗಾದರೂ ಈತ ಜೀವಿಸಿದ್ದ ಎಂದು ಇದರಿಂದ ಸಿದ್ಧವಾಗುತ್ತದೆ. ಕವಿಯ ಕೊನೆಯ ಕೃತಿ 'ದುರ್ಗಾಭಕ್ತಿತರಂಗಿಣಿ' ಧೀರಸಿಂಹರಾಜನ ಕಾಲದಲ್ಲಿ ಮುಗಿಯಿತು. ಧೀರಸಿಂಹನ ರಾಜತ್ವಕಾಲ ಕೂಡ ಸರಿಯಾಗಿ ಗೊತ್ತಿಲ್ಲ. ಆತ ಲಕ್ಷ್ಮಣಾಬ್ದ ೩೨೧ರಲ್ಲಿ ಆಳುತ್ತಿದ್ದ ಎಂದು ಮಾತ್ರ ತಿಳಿದಿದೆ.

ಶಿವಸಿಂಹ ವಿದ್ಯಾಪತಿಯ ಅತ್ಯಂತ ಮೆಚ್ಚಿನ ಆಶ್ರಯದಾತನಾಗಿದ್ದ. ಆತನ ಹೆಸರಿಗೆ ಕವಿ ಸುಮಾರು ಇನ್ನೂರು-ಇನ್ನೂರೈವತ್ತು ಶ್ರೇಷ್ಠ ಪದ (ಹಾಡು)ಗಳನ್ನು ಅರ್ಪಿಸಿದ್ದಾನೆ. ವಿದ್ಯಾಪತಿ ಒಮ್ಮೆ ಆತನನ್ನು ಕನಸಿನಲ್ಲಿ ಕಂಡು ತನ್ನ ಅವಸಾನ ದಿವಸವನ್ನು ಕಂಡುಕೊಂಡ. ಈ ಅಂಶ ವಿದ್ಯಾಪತಿಯ ಪದವೊಂದರಿಂದ ಸ್ಪಷ್ಟವಾಗುತ್ತದೆ.

ಮೂವತ್ತೆರಡು ವರ್ಷಗಳ ಬಳಿಕ (ಲಕ್ಷ್ಮಣಾಬ್ದ ೩೨೮ರಲ್ಲಿ) ನಾನು ಶಿವಸಿಂಹಭೂಪನನ್ನು ಕನಸಿನಲ್ಲಿಕಂಡೆ, (ಗತಿಸಿಧ

ಅತ್ಯಂತ ಆತ್ಮೀಯರನ್ನು ಕಂಡರೆ ಸಾವು ಸಮೀಪ ಎಂಬ ನಂಬಿಕೆ ಮಿಥಿಲೆಯ ಜನರಲ್ಲಿದೆ.) ಹಿಂದಿನವರನ್ನು ಗುರುಜನರನ್ನು ಬಹಳ ಮಂದಿ ನೋಡಿದೆ. ಆದ್ದರಿಂದ ಈಗ ನಾನು ಆಯುವಿಹೀನನಾದೆ. ಕಣ್ಣಿನಲ್ಲಿ ನೀರು ಬುಳ ಬುಳನೆ ಬರತೊಡಗಿತು. ಕಾಲ ಯಾರನ್ನು ತಾನೆ ಸ್ಥಿರವಾಗಿಟ್ಟೀತು ?

ಇದರಿಂದ ವಿದ್ಯಾಪತಿ ಎಂಭತ್ತೇಳು, ಎಂಭತ್ತೆಂಟು ವರ್ಷಗಳವರೆಗೆ ಬದುಕಿದ್ದನೆಂಬುದು ಸ್ಪಷ್ಟ. ಬಹುಶಃ ಇದಾದ ಎರಡು ವರ್ಷಗಳಲ್ಲಿ ಆತ ತೀರಿಕೊಂಡಿರಬೇಕೆಂದು ಡಾ. ಬಾಬೂ ರಾಮ ಸಕ್ಸೇನಾ ಊಹಿಸುತ್ತಾರೆ. ಆತನ ಸಾವನ್ನು ಕುರಿತು ಒಂದು ಪದ ಪ್ರಚಲಿತವಾಗಿದೆ :

ವಿದ್ಯಾಪತಿ ಕ ಆಯು ಅವಸಾನ ।
ಕಾತಿಕ ಧವಲ ತ್ರಯೋದಸಿ ಜಾನ ॥
(ವಿದ್ಯಾಪತಿಯ ಅವಸಾನ ಕಾರ್ತೀಕ ಬಹುಳ ತ್ರಯೋದಶಿ ಎಂದು ತಿಳಿ)

ರಾಜಾ ಶಿವಸಿಂಹ ಕ್ರಿ.ಶ. ೧೪೧೫ರ ಸರಿಸುಮಾರಿನಲ್ಲಿ ನಿಧನ ಹೊಂದಿದ. ಅಲ್ಲಿಂದ ಮೂವತ್ತೆರಡುವರ್ಷ ಈಚೆಗೆ ಎಂದರೆ ೧೪೪೭ನೇ ಇಸವಿಗೆ ಕೊಂಚ ತರುವಾಯ ವಿದ್ಯಾಪತಿ ತೀರಿಕೊಂಡಿರಬೇಕು.

ವಿದ್ಯಾಪತಿಯ ಕೊನೆಗಾಲವನ್ನು ಕುರಿತು ಎರಡು ಮನೋಹರವಾದ ದಂತಕತೆಗಳಿವೆ.

ವಿದ್ಯಾಪತಿಯ ಕಾವ್ಯಮಾಧುರಿಗೆ ಮಾರುಹೋಗಿ ಸಾಕ್ಷಾತ್ ಶಿವನೇ ಅವನ ಮನೆಯಲ್ಲಿ ಆಳಾಗಿ ದುಡಿಯುತ್ತಿದ್ದ

ನಂತೆ. ಆ ಆಳಿನ ಹೆಸರು 'ಉಗನಾ' ಎಂದು. ಅವನು ಯಾವಾಗಲೂ ಕವಿಯ ಸೇವೆಯಲ್ಲೇ ಲೀನನಾಗಿರುತ್ತಿದ್ದ. ಒಂದುದಿನ ಅವನ ಜೊತೆ ಕವಿ ಎಲ್ಲೋ ಹೋಗುತ್ತಿದ್ದ. ದಾರಿಯಲ್ಲಿ ಆತನಿಗೆ ಬಾಯಾರಿಕೆಯಾಯಿತು. ನೀರು ತರುವಂತೆ ಆಳಿಗೆ ಹೇಳಿದ. ಕೊಂಚ ಹೊತ್ತಿನಲ್ಲಿಯೇ ಆಳು ಚೊಂಬು ತುಂಬ ನೀರುತಂದ. ಅದನ್ನು ಕುಡಿದ ಕೂಡಲೆ ವಿದ್ಯಾಪತಿಗೆ ಅದು ಗಂಗಾಜಲವೆಂದು ಗೊತ್ತಾಯಿತು. ಆದ್ದರಿಂದ ಆತ ಕೇಳಿದ " ಉಗನಾ ಈ ನೀರು ಎಲ್ಲಿಂದ ತಂದೆ ? "

" ಇಲ್ಲೇ ಹತ್ತಿರದ ಬಾವಿಯಿಂದ "

" ಇದು ಬಾವಿಯ ನೀರಲ್ಲ, ಗಂಗಾಜಲ "

ಏನೇ ಹೇಳಿದರೂ ಆಳಿನ ಮಾತಿನ ಮೇಲೆ ವಿದ್ಯಾಪತಿಗೆ ನಂಬಿಕೆ ಬರಲಿಲ್ಲ. ಕವಿ ಒಂಡಿಸಿ ಒಂಡಿಸಿ ಕೇಳಿದಾಗ 'ಉಗನಾ' ತನ್ನ ನೈಜಸ್ವರೂಪವನ್ನು ವ್ಯಕ್ತಪಡಿಸಿದ. ಅಲ್ಲಿ ಹತ್ತಿರದಲ್ಲೆಲ್ಲೂ ನೀರು ಕಾಣದಿರಲು ಶಿವ ತನ್ನ ಜಟೆಯಿಂದ ಗಂಗೆಯನ್ನು ತುಂಬಿ ತಂದುಕೊಟ್ಟಿದ್ದ. ಅನಂತರ ಶಿವ ಹೇಳಿದ. " ನೀನು ನನ್ನ ಅಂತರಂಗ ಭಕ್ತ. ನಾನು ನಿನ್ನನ್ನು ಅಗಲಿರಲಾರೆ. ಆದರೆ ನೀನು ನನ್ನ ಗುಟ್ಟನ್ನು ಬಿಟ್ಟುಕೊಡುವುದಿಲ್ಲ ಎಂದು ಮಾತು ಕೊಡುವುದಾದರೆ ನಾನು ಇರುತ್ತೇನೆ. ಅದು ಬಯಲಾದ ಕೂಡಲೆ ಕಣ್ಮರೆಯಾಗುತ್ತೇನೆ."

ವಿದ್ಯಾಪತಿ ಒಪ್ಪಿಕೊಂಡ. ಉಗನಾ ಎಂದಿನಂತೆ ಅವನ ಬಳಿಯೇ ಇದ್ದ. ಆದರೆ ವಿದ್ಯಾಪತಿ ಅವನಿಗೆ ಯಾವ ಕೆಲಸ

ವನ್ನೂ ಹೇಳುತ್ತಿರಲಿಲ್ಲ. ಒಂದು ದಿನ ಆತನ ಹೆಂಡತಿ ಏನನ್ನೋ ತರುವಂತೆ ಆಳಿಗೆ ಹೇಳಿದಳು. ಅದನ್ನು ತರುವುದರಲ್ಲಿ ಕೊಂಚ ತಡವಾಯಿತು. ಅವಳ ಸಿಟ್ಟು ನೆತ್ತಿಗೇರಿತು. ಬಂದ ಕೂಡಲೆ ಕಟ್ಟಿಗೆ ಹಿಡಿದುಕೊಂಡು ಅವನನ್ನು ಹೊಡೆಯ ತೊಡಗಿದಳು. ಇದನ್ನು ಕಂಡು ವಿದ್ಯಾಪತಿ ಕೂಗಿಕೊಂಡ, "ಎಲೇ,ಎಂಥ ಕೆಲಸ ಮಾಡುತ್ತಿದ್ದೀಯೆ? ಸಾಕ್ಷಾತ್ ಶಿವನನ್ನು ಹೊಡೆಯುವುದೆ?"

ಸರಿ, ತನ್ನ ಗುಟ್ಟು ರಟ್ಟಾದುದನ್ನು ಕಂಡು ಶಿವ ಅಲ್ಲೇ ಬಯಲಾದ. ವಿದ್ಯಾಪತಿ ಶಿವನ ವಿರಹದಲ್ಲಿ ಹುಚ್ಚನಂತಾದ 'ಉಗನಾ, ಮರಳಿ ಬಾ' ಎಂದು ಪರಿಪರಿಯಾಗಿ ಪ್ರಲಾಸ ಮಾಡಿದ. ಕವಿಯ ಶೋಕ ಶ್ಲೋಕವಾಗಿ ಮೂಡಿತು:—

"ಉಗನಾ ರೇ ಮೋರ ಕತಏ ಗೇಲಾಉ ।
ಕತಏ ಗೇಲಾ ಸಿವ ಕೀದಹು ಭೇಲಾಉ ॥
  ಭಂಗ ನಹಿಂ ಬಟುವಾರುಸಿ ಬೈಸಲಾಹ ।
  ಜೋಹಿ ಹೇರಿ ಆನಿ ದೇಲಹಂಸಿ ಉಠಲಾಹ ॥
ಜೇ ಮೋರಕಹತಾ ಉಗನಾ ಉದೇಸ ।
ತಾಹಿ ಕಹತಾ ಕರಕಂಗನಾ ಬೇಸ ॥
  ನಂದನ ಬನ ಮೇ ಭೇಟಲ ಮಹೇಸ ।
  ಗೌರಿ ಮನ ಹರಖಿತ ಮೇಟಲ ಕಲೇಸ ॥
ವಿದ್ಯಾಪತಿ ಭನ ಉಗನಾ ಸೋಂ ಕಾಜ್ ।
ನಹಿ ಹಿತಕರ ಮೋರ ತ್ರಿಭುವನ ರಾಜ್ ॥

(ಓ ನನ್ನ ಉಗನಾ, ನೀನೆಲ್ಲಿಗೆ ಹೋದೆ? ಎಲ್ಲಿ ಹೋದೆ ಶಿವ, ಏನಾಗಿ ಹೋದೆ! ನೀನಿಲ್ಲದೆ ನನಗೆ 'ಭಂಗಿ' ಇಲ್ಲವಾಗಿದೆ

ಕೈಚೀಲ! ಹಿಡಿದುಕೊಳ್ಳುವರಿಲ್ಲ. ಇವುಗಳನ್ನು ನನಗೆ ಕೊಡುವರುಯಾರು ? ಉಗನಾ, ಯಾರನ್ನು ನನ್ನವನು ಎಂದು ಕರೆಯಲಿ ? ಯಾರಿಗೆ ನನ್ನ ಕರ ಕಂಕಣವನ್ನು ಕೊಡಲಿ, ನಂದನ ವನದಲ್ಲಿ ಮಹೇಶನ ಕಂಡೆ. ಗೌರೀ ಮನೋವಲ್ಲಭ ಕ್ಲೇಶವ ಕಳೆವ. ವಿದ್ಯಾಪತಿಯೆಂದ ' ಉಗನಾ, ನೀನಿಲ್ಲದೆ ನನಗೆ ಯಾವ ಕೆಲಸವೂ ಬೇಕಿಲ್ಲ, ತ್ರಿಭುವನದ ರಾಜ್ಯವೂ ಬೇಡವಾಗಿದೆ.)

ಉಗನಾನ ವಿರಹವಲ್ಲಿ ಕವಿ ಎದೆ ಒಡೆದು ಸತ್ತಿರಬೇಕು. ಮತ್ತೊಂದು ಕಥೆಯ ಪ್ರಕಾರ ಕವಿ ತನ್ನ ಕೊನೆಗಾಲವನ್ನು ಅರಿತು ಗಂಗಾತೀರವಲ್ಲಿ ಕೊನೆಯುಸಿರೆಳೆಯಬೇಕೆಂದು ಗಂಗೆಯ ಬಳಿಗೆ ಹೋದನಂತೆ. " ಬಿಸಪಿ "ಯಿಂದ ಹೊರಟು ಮೂರನೆಯ ದಿನ ಮವೂಬಾಜಿತಪುರವನ್ನು ತಲುಪಿದ. ಕವಿ ಇಲ್ಲಿ ತನ್ನ ಯಾತ್ರೆಯನ್ನು ನಿಲ್ಲಿಸಿದ. ಪಲ್ಲಕ್ಕಿಯಿಂದ ಇಳಿದ ತನ್ನ ಜೊತೆ ಬಂದ ಪರಿಜನರಿಗೆ ಹೇಳಿದ, " ನಾನು ತಾಯಿ ಗಂಗೆಯ ದರ್ಶನಕ್ಕಾಗಿ ಇಷ್ಟು ದೂರ ಬಂದೆ, ತಾಯಿ ತನ್ನ ಮಗನಿಗಾಗಿ ಎರಡು ಹರಿದಾರಿ ದೂರವೂ ಬರಲಾರಳೆ ? "

ರಾತ್ರಿ ಕಳೆಯಿತು. ಮೂರನೆಯ ದಿನ ಬೆಳಗಾಗುವುದರೊಳಗಾಗಿ ಗಂಗೆ ತನ್ನ ದಿಕ್ಕನ್ನೇ ಬದಲಾಯಿಸಿ ಎರಡು ಹರಿದಾರಿ ಮುಂದಕ್ಕೆ ಬಂದಿತು. ಜನ ಅದನ್ನು ಕಂಡು ಆಶ್ಚರ್ಯಗೊಂಡಿತು. ವಿದ್ಯಾಪತಿ ಗಂಗೆಯ ಪವಿತ್ರ ಸಾನ್ನಿಧ್ಯದಲ್ಲಿ ದೇಹತ್ಯಾಗ ಮಾಡಿದ. ಗಂಗೆ ಇಂದಿಗೂ ಅಲ್ಲಿ ಡೊಂಕಾಗಿ ಹರಿಯುತ್ತಿದೆ.

ವಿದ್ಯಾಪತಿಯ ಚಿತೆಯಮೇಲೆ ಒಂದು ಶಿವಾಲಯವನ್ನು ನಿರ್ಮಿಸಲಾಯಿತು. ಅದು ಇಂದಿಗೂ ವಿದ್ಯಾಪತಿಯ ಸ್ಮಾರಕವಾಗಿ ಭಾವುಕರನ್ನು ಆಕರ್ಷಿಸುತ್ತಿದೆ.

ವಿದ್ಯಾಪತಿಯ ಧರ್ಮ ಸಂಪ್ರದಾಯವನ್ನು ಕುರಿತು ಸಾಕಷ್ಟು ವಿವಾದ ನಡೆದಿದೆ. ಆತ ಶೈವ ಎಂದು ಶಿವನಂದನ ಠಾಕೂರ್ ಮೊದಲಾದವರು ವಾದಿಸಿದರೆ ಶಾಕ್ತನಿರಬಹುದು ಎಂದು ಊಹಿಸುವವರೂ ಇದ್ದಾರೆ. ಅತ ಬರೆದ ರಾಧಾಕೃಷ್ಣರ ಮೇಲಣ ಗೀತಗಳಿಗೆ ಅಧ್ಯಾತ್ಮಿಕ ಅರ್ಥ ನೀಡಿ ಆತ ವೈಷ್ಣವ ಭಕ್ತ ಎಂದು ಬಂಗಾಳಿಗಳು ಸಾಧಿಸಿದ್ದಾರೆ. ಬಂಗಾಳದ ಸಹಜಿಯಾ ವೈಷ್ಣವ ಪಂಥದಲ್ಲಿ ಆತನಿಗೆ ಹಿರಿಯ ಸ್ಥಾನವಿದೆ. ಆದರೆ ವಿದ್ಯಾಪತಿ ರಾಧಾಕೃಷ್ಣರನ್ನು ಕುರಿತು ಬರೆದ ಗೀತೆಗಳೆಲ್ಲ ಶೃಂಗಾರ ಗೀತೆಗಳು, ರತಿ ಗೀತೆ, ಪ್ರೇಮಗೀತೆಗಳು. ಆದ್ದರಿಂದ ಅದರಲ್ಲಿ ಆಧ್ಯಾತ್ಮಿಕ ಅರ್ಥವನ್ನು ಅರಸುವುದು ಹುಚ್ಚುತನ ಎಂದು ರಾಮಚಂದ್ರ ಶುಕ್ಲ ಮೊದಲಾದವರು ಅಭಿಪ್ರಾಯ ಪಟ್ಟಿದ್ದಾರೆ. ಈ ಅಭಿಪ್ರಾಯದಲ್ಲಿ ಆಂಶಿಕ ಸತ್ಯವಿದೆ. ಮಹಾ ಮಹೋಪಾಧ್ಯಾಯ ಹರಪ್ರಸಾದಶಾಸ್ತ್ರಿಯವರು ಆತ ಪಂಚ ದೇವೋಪಾಸಕ ಎಂದು ಅಭಿಪ್ರಾಯಪಟ್ಟಿದ್ದಾರೆ. ವಸ್ತುತಃ ವಿದ್ಯಾಪತಿ ಸಮನ್ವಯವಾದಿ. ಎಲ್ಲ ದೇವರನ್ನೂ ಸಮಾನವಾಗಿ ಕಾಣುವ ಸ್ಮಾರ್ತಮತಾನುಯಾಯಿ ಎನ್ನುವ ಅಭಿಪ್ರಾಯದಲ್ಲಿ ಅರ್ಥವಿದೆ. ವಿದ್ಯಾಪತಿಯ ಹರಿಹರೋಪಾಸನೆ, ಸಮನ್ವಯ ಭಾವನೆ ಇವುಗಳ ಮೇಲೆ ಕನ್ನಡ ನಾಡಿನ ಭಾಗವತ ಸಂಪ್ರದಾ

ಯದ ಪ್ರಭಾವ ಬಿದ್ದಿರಬಹುದು. ಏಕೆಂದರೆ ಆ ಹೊತ್ತಿಗಾಗಲೇ ಬಂಗಾಳದಲ್ಲಿ ಕನ್ನಡನಾಡಿನ ಬ್ರಹ್ಮಕ್ಷತ್ರಿಯ ಕುಲಕ್ಕೆ ಸೇರಿದ ಸೇನರಾಜರು ತಮ್ಮ ರಾಜ್ಯವನ್ನು ಸ್ಥಾಪಿಸಿ ಅಲ್ಲಿ ಹರಿಹರೋಪಾಸನೆಯನ್ನು ಬಳಕೆಗೆ ತಂದಿದ್ದರು. ಇದೇ ಸೇನವಂಶದ ಅರಸನಾದ ವಿಜಯಸೇನ ಪ್ರದ್ಯುಮ್ನೇಶ್ವರ ದೇವಾಲಯವನ್ನು ಕಟ್ಟಿಸಿ ಅಲ್ಲಿ ಹರಿಹರ ಮೂರ್ತಿಯ ಈ ಸ್ತೋತ್ರವನ್ನು ಕೆತ್ತಿಸಿ ಶಿಲಾಶಾಸನ ಹಾಕಿಸಿದ್ದ !

" ಲಕ್ಷ್ಮೀ ವಲ್ಲಭ ಶೈಲಜಾದಯಿತಯೋರದ್ವೈತಲೀಲಾಗೃಹಂ,
ಪ್ರದ್ಯುಮ್ನೇಶ್ವರ ಶಬ್ದಲಾಞ್ಛನ ಮಧಿಷ್ಠಾನಂ ನಮಸ್ಕುರ್ಮಹೇ ।

ಡಾ. ಶಿವಪ್ರಸಾದಸಿಂಹ ಅವರು ಹೇಳುವಂತೆ ಉತ್ತರ ಮತ್ತು ಪೂರ್ವ ಭಾರತದಲ್ಲಿ ಶೈವ, ವೈಷ್ಣವ ಮತಸಮನ್ವಯದ ಪ್ರಯತ್ನ ಸೇನವಂಶದ ಕಾಲದಲ್ಲೇ ಆರಂಭಗೊಂಡಿತ್ತು. * ಇದರಪ್ರಭಾವ ಮಿಥಿಲೆಯ ಮೇಲೂ ಉಂಟಾಯಿತು. ಈ ರೀತಿ ವಿದ್ಯಾಪತಿ ಪರೋಕ್ಷವಾಗಿಯಾದರೂ ಸರಿ ಕನ್ನಡ ನಾಡಿನ ಹರಿಹರಾದ್ವೈತ ಸಂಪ್ರದಾಯಕ್ಕೆ ಋಣಿಯಾಗಿದ್ದಾನೆ. ಇದು ಇಲ್ಲಿಗೇ ನಿಲ್ಲಲಿಲ್ಲ. ವಿದ್ಯಾಪತಿಯ ಪ್ರಭಾವ ಹಿಂದಿಯ ಕವಿಗುರು ತುಲಸೀದಾಸರ ಮೇಲೂ ಬಿದ್ದಿದೆ. ಅವರೂ ಕೂಡ ' ಹರಿಹರ ' ನನ್ನು ಸ್ತುತಿಸಿದ್ದಾರೆ.

ವಿದ್ಯಾಪತಿ ಹಲವಾರು ಜನ ರಾಜರ ಆಶ್ರಯದಲ್ಲಿದ್ದ. ರಾಜಾ ಗಣೇಶ್ವರ ಮೋಸದಿಂದ ಕೊಲ್ಲಲ್ಪಟ್ಟ, ಆದ್ದರಿಂದ ವಿದ್ಯಾ

* ಡಾ॥ ಶಿವಪ್ರಸಾದ್‌ಸಿಂಹ : ವಿದ್ಯಾಪತಿ. ಪು೯೨.

ಪತಿ ಬಹಳ ದಿನಗಳವರೆಗೆ ರಾಜಾಶ್ರಯವಿಲ್ಲದೆ ಅಲೆಯುತ್ತಿದ್ದ. ಅದೂ ಅಲ್ಲದೆ ಗಣೇಶ್ವರ ಸತ್ತ ಬಳಿಕ ಮಿಥಿಲೆಯಲ್ಲಿ ಎಲ್ಲಿಲ್ಲದ ಅರಾಜಕತೆ ಹಬ್ಬಿತು. ಗಣೇಶ್ವರನ ಮಗ ಕೀರ್ತಿಸಿಂಹ ತಾನು ಕಳೆದುಕೊಂಡಿದ್ದ ರಾಜ್ಯವನ್ನು ಮರಳಿ ಪಡೆಯುವ ಪ್ರಯತ್ನ ದಲ್ಲಿದ್ದ. ಹೀಗಾಗಿ ಅವನು ಕವಿಗೆ ಅಶ್ರಯ ನೀಡುವ ಸ್ಥಿತಿ ಯಲ್ಲಿರಲಿಲ್ಲ. ಆಗ ವಿದ್ಯಾಪತಿ ಆಶ್ರಯವನ್ನು ಅರಸುತ್ತ ನಸರತ್ ಶಾಹ್, ಆಜಂ ಶಾಹ್ ಮೊದಲಾದ ಸುಲ್ತಾನರ ಬಳಿಗೆ ಹೋಗಬೇಕಾಯಿತು. ತನ್ನ ಕೃತಿಗಳಲ್ಲಿ ಕೆಲವು ಕಡೆ ಈ ಅರ ಸರನ್ನು ಅವನು ಹೆಸರಿಸಿದ್ದಾನೆ :

“ ಕವಿಶೇಖರ ಭನ ಅಪರುವ ರೂಪ ದೇಖಿ
ರಾಯನಸರದ್ ಸಾಹ್ ಭಜಲಿ ಕಮಲಮುಖಿ ”

ಮತ್ತೊಂದುಕಡೆ ಹುಸೇನಶಾಹ್ ಎಂಬ ಸುಲ್ತಾನನನ್ನೂ ಹೆಸರಿಸಿದ್ದಾನೆ :

ಭನ ಇ ಅಸೋಧರ ನವಕವಿ ಶೇಖರ
ಪುಹವೀ ತೇಸರ ಕಹಾಂ
ಸಾಹ ಹುಸೇನ ಭೃಂಗ ಸಮನಾಗರ
ಮಾಲತಿ ಸೇನಿಕ ಜಹಾಂ ”

ಬಂಗಾಳದ ಸುಲ್ತಾನ ಗಯಾಸುದ್ದೀನ್ ಆಜಂಶಾಹನ ಬಳಿಗೂ ಅವನು ಹೋಗಿರಬೇಕು ;

" ವೇಕತಾಓ ಚೋೀರ ಗುಪುತ ಕರಿ ಕತಖನಿ
ವಿದ್ಯಾಪತಿ ಕವಿ ಭಾನ
ಮಹಲಮ ಜುಗಪತಿ ಚಿರೇ ಜೀಪೇ ಜೀಪಥು
ಗ್ಯಾನದೀನ ಸುರತಾನ ॥ "

ವಿದ್ಯಾಪತಿಯಂಥ ಸಂಸ್ಕಾರೀ ಬ್ರಾಹ್ಮಣ ಈ ಸುಲ್ತಾನರ ಬಳಿಗೆ ಹೋಗಿ ಅವರ ಆಶ್ರಯ ಕೋರಬೇಕಾದರೆ ಅವನ ಆರ್ಥಿಕ ಸ್ಥಿತಿ ತುಂಬ ಹೀನವಾಗಿರಬೇಕು. ಏನಾದರೂ ಆಗಲಿ ವಿದ್ಯಾಪತಿ ವಿಧಿಯಿಲ್ಲದೆ ಇವರ ಬಳಿಗೆ ಹೋದನೇ ಹೊರತು ಅವರ ವಿಷಯವಾಗಿ ಅವನಿಗೆ ಎಳ್ಳಷ್ಟೂ ಗೌರವವಿರಲಿಲ್ಲ. 'ಕೀರ್ತಿಲತಾ' ಕಾವ್ಯದಲ್ಲಿ ಆತ ಮುಸಲ್ಮಾನರ ಅತ್ಯಾಚಾರವನ್ನು ಅತ್ಯಂತ ಕರುಣ ಭೀಕರವಾಗಿ ಬಣ್ಣಿಸಿದ್ದಾನೆ.

ಕ್ರಿ.ಶ. ೧೪೦೨-೩ರಲ್ಲಿ ಜೌನಪುರದ ಸುಲ್ತಾನ ಇಬ್ರಾಹಿಂ ಶಾಹನ ನೆರವಿನಿಂದ ಕೀರ್ತಿಸಿಂಹ ತಿರಹುತ್ತನ್ನು ಗೆದ್ದು ತನ್ನ ರಾಜ್ಯವನ್ನು ಮರಳಿ ಪಡೆದ. ಕೀರ್ತಿಸಿಂಹ ಜೌನಪುರದ ಸುಲ್ತಾನನ ನೆರವನ್ನು ಕೋರಲು ಹೋದಾಗ ವಿದ್ಯಾಪತಿಯೂ ಅವನ ಜೊತೆ ಹೋಗಿದ್ದನಂತೆ. ಕೀರ್ತಿಸಿಂಹ ತಾನು ರಾಜನಾದಕೂಡಲೆ ವಿದ್ಯಾಪತಿಯನ್ನು ತನ್ನ ಆಸ್ಥಾನದ ಪಂಡಿತನನ್ನಾಗಿ ಮಾಡಿಕೊಂಡ. ಕೀರ್ತಿಸಿಂಹನ ಗುಣಗಾನ ಮಾಡಲು ಕವಿ 'ಕೀರ್ತಿಲತಾ' ಗ್ರಂಥವನ್ನು ಬರೆದ. ಇದೇ ರಾಜನ ಪ್ರೇಮಪ್ರಸಂಗವನ್ನು ಕುರಿತು ಕವಿ 'ಕೀರ್ತಿ ಪತಾಕಾ' ಎಂಬ ಗ್ರಂಥವನ್ನು ರಚಿಸಿದ.

ಕೀರ್ತಿಸಿಂಹ ಬಹುಬೇಗನೆ ತೀರಿಕೊಂಡ. ಅವನ ನಂತರ ಅವನ ಚಿಕ್ಕಪ್ಪ ದೇವಸಿಂಹ ರಾಜನಾದ. ಆತ ಕೂಡ ವಿದ್ಯಾಪತಿಯನ್ನು ರಾಜಕವಿಯನ್ನಾಗಿ ನೇಮಿಸಿಕೊಂಡಿದ್ದ. ಆತನ ಆಳ್ವಿಕೆಯಲ್ಲೇ ಕವಿ ' ಭೂಪರಿಕ್ರಮಾ ' ಎಂಬ ಸಂಸ್ಕೃತ ಗ್ರಂಥವನ್ನು ಬರೆದದ್ದು. ದೇವಸಿಂಹನ ಬಳಿಕ ಅವನ ಹಿರಿಯ ಮಗ ಶಿವಸಿಂಹ ಸಿಂಹಾಸನವೇರಿದ. ಶಿವಸಿಂಹನ ಪಟ್ಟದರಾಣಿ ಲಖಿಮಾ ದೇವಿ. ಇಬ್ಬರೂ ಸಹೃದಯರು, ರಸಿಕ ಚಕ್ರಿಗಳು. ಲಖಿಮಾ ದೇವಿ ಅನುಪಮ ಸುಂದರಿ, ವಿದುಷಿ, ಕವಯಿತ್ರಿ, ಗಾನಕೋಕಿಲೆ ಇಂಥ ಗಂಡಹೆಂಡಿರ ಆಶ್ರಯದಲ್ಲಿ ವಿದ್ಯಾಪತಿ ಸಕಲ ಸೌಭಾಗ್ಯಗಳನ್ನೂ ಪಡೆದ. ವಿದ್ಯಾಪತಿ ಮತ್ತು ಶಿವಸಿಂಹ ಇವರಿಬ್ಬರ ಸಂಬಂಧ ಪಂಪ ಅರಿಕೇಸರಿಗಳ ಸಂಬಂಧವನ್ನು ನೆನಪಿಗೆ ತರುತ್ತದೆ. ಇಬ್ಬರೂ ಸಮವಯಸ್ಕರು. ಕೀರ್ತಿಸಿಂಹನ ಕಾಲಕ್ಕೆ ವಿದ್ಯಾಪತಿ ' ಖೇಲನ ಕವಿ 'ಯಾಗಿದ್ದರೆ ಶಿವಸಿಂಹನ ಸಮಯದಲ್ಲಿ ಆತ ಅವನ ' ಸಖಾಕವಿ 'ಯಾಗಿದ್ದ. ಶಿವಸಿಂಹನನ್ನು ಕವಿ ಹಾಡಿ ತಣಿಯನು, ಹೊಗಳಿ ತಣಿಯನು. ಅದರೂ ಕವಿ ತಾನು ರಾಜನ ಭಟ್ಟಂಗಿ ಇಲ್ಲವೆ ಚಾರಣ ಎಂದುಕೊಳ್ಳಲಿಲ್ಲ, ಅವನು ಅವನ ಅಂತರಂಗ ಸಖನಾಗಿದ್ದ. ಪಂಪ ಅರಿಕೇಸರಿಯ ಅರಸಿಯೊಡನೆ ನೆತ್ತ (ಪಗಡೆ)ವಾಡುವಷ್ಟು ಸಲಿಗೆ ಪಡೆದಿದ್ದರೆ ವಿದ್ಯಾಪತಿ ಶಿವಸಿಂಹ ಮತ್ತು ಅವನ ರಾಣಿಯೆದುರಿಗೆ ಅವನ ಅಂತಃಪುರದಲ್ಲಿ ಪ್ರೇಮಗೀತೆ ರಚಿಸಿ ಹಾಡುತ್ತಿದ್ದ. ಅವನು ತಾನು ಬರೆದ ರಾಧಾಕೃಷ್ಣರ ಪ್ರೇಮ ರೂಪಾಸಕ್ತಿ, ಮುನಿಸು ಮತ್ತು ಕಾಮುಕಲಾ ನಿರೂಪಕ ಗೀತಗಳನ್ನು ಅವರಿಗೆ

ಸಮರ್ಪಿಸಿದ್ದಾನೆ. ಅವುಗಳ ಕೊನೆಯಲ್ಲಿ ಶಿವಸಿಂಹ, ಲಖಿಮಾ ದೇವಿಯರ ಪ್ರಶಸ್ತಿ ವಾಕ್ಯಗಳನ್ನು ಜೋಡಿಸಿದ್ದಾನೆ. ಅರಿಕೇ ಸರಿಯಂತೆ ಶಿವಸಿಂಹ ಕೂಡ ವಿದ್ಯಾಪತಿಯನ್ನು ಅತ್ಯಂತ ಪ್ರೇಮಾದರಗಳಿಂದ ಕಂಡ. ಅವನಿಗೆ 'ವಿಸಪಿ' ಗ್ರಾಮವನ್ನೇ ದಾನಮಾಡಿ ಶಾಸನ ಹಾಕಿಕೊಟ್ಟ, 'ಅಭಿನವ ಜಯದೇವ' ಎಂದು ಬಿರುದಿತ್ತು ಧನಕನಕ ವಸ್ತ್ರಭೂಷಣಗಳಿಂದ ಆತನನ್ನು ಸನ್ಮಾನಿಸಿದ. ಆ ತಾಮ್ರಶಾಸನದಿಂದ ವಿದ್ಯಾಪತಿಯ ಮೇಲೆ ರಾಜನಿಗಿದ್ದ ಅಭಿಮಾನ ಪ್ರಕಟವಾಗುತ್ತದೆ. :

"ಸ್ವಸ್ತಿ ಶ್ರೀ ಗಜರಥ ಇತ್ಯಾದಿ ಸಮಸ್ತ ಪ್ರಕ್ರಿಯಾ ವಿರಾಜಮಾನ ಶ್ರೀಮದ್ರಾಮೇಶ್ವರೀಶ್ವರ ಲಬ್ಧ ಪ್ರಸಾದ ಭವಾನೀ ಭವ ಭಕ್ತಿ ಭಾವನಾ ಪರಾಯಣ-ರೂಪ ನಾರಾಯಣ ಮಹಾರಾಜಾಧಿರಾಜ—ಶ್ರೀಮಚ್ಛಿವಸಿಂಹದೇವಪಾದಾಃ ಸಮರ ವಿಜಯಿನೋ ಜರೇ ಲತಪ್ಪಾಯಾಂ ವಿಸಪೀ ಗ್ರಾಮ ವಾಸ್ತವ್ಯ ಸಕಲ ಲೋಕಾನ್ ಭೂಕರ್ಷಕಾಂಶ್ಚ ಸಮಾದಿಶಂತಿ ಜ್ಞಾತಮಸ್ತು ಭವತಾಂ. ಗ್ರಾಮೋಽಯಮಸ್ಮಾಭಿಃ ಸಪ್ರಗ್ರಿ ಯಾಭಿನವ ಜಯದೇವ—ಮಹಾರಾಜ ಪಂಡಿತ ಠಕ್ಕುರ—ಶ್ರೀ ವಿದ್ಯಾಪತಿಭ್ಯಃ ಶಾಸನೀಕೃತ್ಯ ಪ್ರದತ್ತೋಽತ ಗ್ರಾಮಕಸ್ಥಾ ಯೂಯಮೇತೇಷಾಂ ವಚನಕರೀ ಭೂಕರ್ಷಕಾದಿ ಕರ್ಮ ಕರಿಷ್ಯ ಥೇತಿ ಲಕ್ಷ್ಮಣಸೇನ ಸಂವತ್ ೨೯೩ ಶ್ರಾವಣ ಸುದಿ ೭ ಗುರೌ."

ಕೆಲವರು ಈ ತಾಮ್ರ ಶಾಸನದ ಪ್ರಾಮಾಣಿಕತೆಯನ್ನು

ಶಂಕಿಸಿದ್ದಾರೆ. ಆದರೆ ಕವಿ ಸ್ವತಃ ತನ್ನ ಪದ್ಯವೊಂದರಲ್ಲಿ ಈ ದಾನವನ್ನು ಉಲ್ಲೇಖಿಸಿದ್ದಾನೆ :

" ಪಂಚ ಗೌಡಾಧಿಪ ಸಿವಸಿಂಹ ಭೂಪಕೃಪಾ ಕರಿಲೇಲ ನಿಜ ಪಾನ
ವಿಸಪೀ ಗ್ರಾಮುದಾನ ಕವಲ ಮೋಹ ರಹಣಿತ ರಾಜಸನಿಧಾನ ‖

ವಿಸಪೀ ಗ್ರಾಮದಲ್ಲಿ ಪ್ರಚಲಿತವಾಗಿರುವ ಜನ ಶ್ರುತಿ ಕೂಡ ಇದನ್ನೇ ಸಮರ್ಥಿಸುತ್ತದೆ. ಅದೂ ಅಲ್ಲದೆ ಬ್ರಿಟಿಷರ ಆಳ್ವಿಕೆಯವರೆಗೂ ಈ ಗ್ರಾಮ ವಿದ್ಯಾಪತಿಯ ವಂಶಿಕರ ಅಧೀನ ದಲ್ಲಿತ್ತು.

ಈ ರೀತಿ ಶಿವಸಿಂಹನ ಅಶ್ರಯದಲ್ಲಿ ವಿದ್ಯಾಪತಿ ಅರಕೆ ಯಿಲ್ಲದ ಬಾಳನ್ನು ಬಾಳಿದ. ಅದರೆ ಈ ಸುಖ ಬಹಳಕಾಲ ಉಳಿಯಲಿಲ್ಲ. ಶಿವಸಿಂಹ ಮಿಥಿಲೆಯಲ್ಲಿ ಆಳುತ್ತಿದ್ದಾಗ ದೆಹಲಿ ಯಲ್ಲಿ ಬಹಲೋಲ್‌ಲೋದಿ ಸುಲ್ತಾನನಾಗಿದ್ದ. ಶಿವಸಿಂಹ ಲೋದಿಗೆ ಪೊಗದಿ ಕೊಡದಿದ್ದುದರಿಂದ ಸುಲ್ತಾನ ಅವನನ್ನು ದಿಲ್ಲಿಗೆ ಕರೆದು ಸೆರೆಯಲ್ಲಿಟ್ಟ. ಆಗ ರಾಜಪರಿವಾರವನ್ನು ನೇಪಾಳದ ಬಳಿ ಬನೌಲಿ ಎಂಬ ಗ್ರಾಮದಲ್ಲಿ ವಿದ್ಯಾಪತಿಯ ಮೇಲ್ವಿಚಾರಣೆಯಲ್ಲಿ ಇಡಲಾಗಿತ್ತು, ಸ್ವಲ್ಪ ದಿನಗಳಾದ ಮೇಲೆ ವಿದ್ಯಾಪತಿ ದಿಲ್ಲಿಗೆ ಹೋಗಿ ತನ್ನ ಕಾವ್ಯ ಕೌಶಲದಿಂದ ಸುಲ್ತಾನನ್ನು ಮೆಚ್ಚಿಸಿ ಶಿವಸಿಂಹನನ್ನು ಬಿಡುಗಡೆ ಮಾಡಿಸಿದ. ಸುಲ್ತಾನ ವಿದ್ಯಾಪತಿಯ ವಿದ್ಯೆಯನ್ನು ಕಂಡು ತುಂಬ ಮೆಚ್ಚಿಕೊಂಡು, ಅವನಿಗೆ ' ಶತಾವಧಾನಿ ' ಎಂಬ ಬಿರುದನ್ನಿತ್ತು ಸನ್ಮಾನ

ಮಾಡಿದ. ಶಿವಸಿಂಹ ವಿದ್ಯಾಪತಿ ಇಬ್ಬರೂ ಬನೌಲಿಗೆ ಮರಳಿದರು. ಕೆಲವು ಕಾಲದ ಮೇಲೆ ಮತ್ತೆ ಶಿವಸಿಂಹ ಸುಲ್ತಾನರಿಗೆ ಯುದ್ಧ ಕೈಗಟ್ಟಿತು. ಅದರಲ್ಲೇ ಶಿವಸಿಂಹ ಮಡಿದನೆಂದು ಕಾಣುತ್ತದೆ. ಶಿವಸಿಂಹನ ತರುವಾಯ ಆತನ ಪತ್ನಿ ಲಖಿಮಾದೇವಿ ಹನ್ನೆರಡು ವರ್ಷಗಳ ಕಾಲ ಮಿಥಿಲೆಯಲ್ಲಿ ರಾಜ್ಯಭಾರ ಮಾಡಿದಳು. ಕ್ರಿ. ಶ. ೧೪೧೮ರಲ್ಲಿ ವಿದ್ಯಾಪತಿ ರಾಜಾ ಪುರಾದಿತ್ಯನಿಗಾಗಿ 'ಲಿಖನಾವಲಿ' ಎಂಬ ಗ್ರಂಥವನ್ನು ಬರೆದ. ಆದರೆ ಶಿವಸಿಂಹ ಲಖಿಮಾದೇವಿಯರ ಬಳಿಕ ವಿದ್ಯಾಪತಿಯ ಮನಸ್ಸು ವೈರಾಗ್ಯದತ್ತ ಹರಿಯಿತು.

# ಕೃತಿಗಳು

ವಿದ್ಯಾಪತಿ ರಸಸಿದ್ಧ ಕವಿ ಮಾತ್ರವೇ ಅಲ್ಲ ಮಹಾ ಪಂಡಿತನೂ ಹೌದು. ಆತನ ವ್ಯಕ್ತಿತ್ವ ಬಹುಮುಖಿಯಾದುದು, ವ್ಯಾಸಂಗ ವಿಸ್ತೃತವಾದುದು. ಅನೇಕ ಭಾಷೆಗಳ ಮೇಲೆ ಆತನಿಗೆ ಅಧಿಕಾರವಿದ್ದಿತು. ಹೀಗಾಗಿ ಆತ ಸಂಸ್ಕೃತ, ಅವಹಟ್ಟ ಇಲ್ಲವೆ ಅಪಭ್ರಂಶ ಮತ್ತು ಮೈಥಿಲೀ ಈ ಮೂರು ಭಾಷೆಗಳಲ್ಲೂ ಕಾವ್ಯರಚನೆ ಮಾಡಿದ್ದಾನೆ. ಈ ರೀತಿ ಭಾಷೆಯ ದೃಷ್ಟಿಯಿಂದ ಈತನ ಗ್ರಂಥಗಳನ್ನು ಮೂರು ಗುಂಪುಗಳಾಗಿ ವಿಂಗಡಿಸ ಬಹುದು.

ಸಂಸ್ಕೃತ:—**ಭೂಪರಿಕ್ರಮಾ** : ಇದು ವಿದ್ಯಾಪತಿಯ ಚೊಚ್ಚಲ ಕೃತಿ. ಮಹಾರಾಜ ದೇವಸಿಂಹನ ಅಪ್ಪಣೆಯ ಮೇರೆಗೆ ಕವಿ ಇದನ್ನು ಬರೆದ. ಬಲರಾಮ ಶಾಪಕ್ಕೆ ತುತ್ತಾಗಿ ತೀರ್ಥ ಯಾತ್ರೆಗೆ ಹೊರಟ ಕಥೆ ಇದರಲ್ಲಿದೆ.

**ಪುರುಷ ಪರೀಕ್ಷಾ** : ಇದೊಂದು ನೀತಿಗ್ರಂಥ. ಶಿವ ಸಿಂಹನ ಆಪ್ಪಣೆಯಂತೆ ಇದನ್ನು ಬರೆಯಲಾಯಿತು. ಇದರಲ್ಲಿ ಲಲಿತ ಕಥೆಗಳ ಮೂಲಕ ಧರ್ಮ ಮತ್ತು ರಾಜನೀತಿಯ ನಿರೂ ಪಣೆಯಿದೆ. ಇದರ ಭೂಮಿಕೆಯಲ್ಲಿ ಪಾರಾವಾರ ಎಂಬ ರಾಜನ ಮಗಳಿಗೆ ಗಂಡು ಹುಡುಕುವ ಪ್ರಸಂಗ ಬರುತ್ತದೆ. ಈ ಸಂದರ್ಭ ದಲ್ಲೇ ಗಂಡಿಗೆ ಇರಬೇಕಾದ ನಾಲ್ಕು ಪ್ರಮುಖ ಗುಣಗಳನ್ನು ಕವಿ ನಿರೂಪಿಸುತ್ತಾನೆ. ಈ ರೀತಿ ಗ್ರಂಥದ ನಾಲ್ಕು ಪರಿಚ್ಛೇದ

ಗಳಲ್ಲಿ ಶೌರ್ಯ, ವಿದ್ವತ್ತು, ಸದ್ಬುದ್ಧಿ, ಪುರುಷಾರ್ಥಕಾರಕ ಮನೋವೃತ್ತಿ ಇವುಗಳ ವರ್ಣನೆಯಿದೆ. ಶೈಲಿ ಅತ್ಯಂತ ಸರಸವಾಗಿದೆ.

**ಲಿಖನಾವಲಿ:** ಇದನ್ನು ರಾಜಬನೌಲಿಯ ರಾಜ ಪುರಾದಿತ್ಯನ ಕೋರಿಕೆಯ ಮೇರೆಗೆ ಬರೆಯಲಾಯಿತು. ಇದರಲ್ಲಿ ಕಾಗದ ಬರೆಯುವುದು ಹೇಗೆ ಎನ್ನುವುದನ್ನು ಜನಸಾಮಾನ್ಯರಿಗೆ ತಿಳಿಸಿದೆ. ವಿದ್ವಾಂಸರಿಗೆ ಮನೋರಂಜನೆಯೂ ಇದೆ. ಕೆಲವು ಕಾಗದಗಳಲ್ಲಿ ಆಗಿನ ಕಾಲದ ಸಾಮಾಜಿಕ ಸ್ಥಿತಿಗತಿಯ ಚಿತ್ರವಿದೆ.

**ಶೈವಸರ್ವಸ್ವಸಾರ:** ಈ ಗ್ರಂಥವನ್ನು ಕವಿ ಮಹಾರಾಜ ಪದ್ಮಸಿಂಹನ ಪತ್ನಿ ವಿಶ್ವಾಸ ದೇವಿಯ ಇಚ್ಛೆಯ ಮೇರೆಗೆ ಬರೆದ. ಇದರಲ್ಲಿ ಶಿವಪೂಜೆಯ ವಿಧಿವಿಧಾನಗಳು ನಿರೂಪಿತವಾಗಿವೆ.

**ಶೈವ ಸರ್ವಸ್ವಸಾರಪ್ರಮಾಣಭೂತ ಪುರಾಣ ಸಂಗ್ರಹ:** ಇದರಲ್ಲಿ ಶೈವಸರ್ವಸ್ವಸಾರಕ್ಕೆ ಪ್ರಮಾಣವನ್ನು ಒದಗಿಸುವ ಪುರಾಣಗಳ ವಚನಗಳ ಸಂಕಲನವಿದೆ.

**ಗಂಗಾವಾಕ್ಯಾವಳಿ:**-ಈ ಗ್ರಂಥ ರಾಣಿ ವಿಶ್ವಾಸದೇವಿಗಾಗಿ ರಚಿತವಾಯಿತು. ಇದರಲ್ಲಿ ಗಂಗಾಪೂಜೆ, ಗಂಗಾಸ್ತೋತ್ರ, ಕೀರ್ತನೆಯಿಂದ ಮೊದಲುಗೊಂಡು ಗಂಗಾತೀರದಲ್ಲಿ ಪ್ರಾಣತ್ಯಾಗ ಮಾಡುವವರೆಗೂ ಮಾಡಬೇಕಾದ ಆಚರಣೆಗಳ ನಿರೂಪಣೆಯಿದೆ.

**ವಿಭಾಗ ಸಾರ:** ಇದು ನರಸಿಂಹದೇವನೆಂಬ ರಾಜನಿಗಾಗಿ ರಚಿತವಾಯಿತು. ಇದರಲ್ಲಿ ದಾಯಭಾಗದ ವರ್ಣನೆ ಅತ್ಯಂತ ಸುಂದರ ಶೈಲಿಯಲ್ಲಿದೆ. ಇಂದಿಗೂ ಮಿಥಿಲೆಯಲ್ಲಿ ಜನ ಆಸ್ತಿ ವಿಭಾಗದಲ್ಲಿ ಇದನ್ನು ಅನುಸರಿಸುತ್ತಾರೆ.

**ದಾನವಾಕ್ಯಾವಲಿ:** ನರಸಿಂಹದೇವನ ಪತ್ನಿ ಧೀರ ಮತಿಗಾಗಿ ಈ ಗ್ರಂಥವನ್ನು ಕವಿ ಬರೆದ. ಇದರಲ್ಲಿ ಎಲ್ಲ ವಿಧ ವಾದ ದಾನಗಳ ಪರಿಚಯವಿದೆ.

**ದುರ್ಗಾಭಕ್ತಿ ತರಂಗಿಣೀ:** ಮಹಾರಾಜ ಭೈರವ ಸಿಂಹನಿಗಾಗಿ ಬರೆದ ಈ ಗ್ರಂಥದಲ್ಲಿ ಮಿಥಿಲೆಯಲ್ಲಿ ವೈಭವದಿಂದ ಆಚರಿಸುವ ದುರ್ಗಾ ಪೂಜೆಯ ವರ್ಣನೆಯಿದೆ. ಪ್ರತಿಮೆಯ ಲಕ್ಷಣ, ಪೂಜಾ ಪದ್ಧತಿ ಮೊದಲಾದವುಗಳ ವಿವೇಚನೆಯಿದೆ.

**ಗಯಾಪತ್ತಲಕ:** ಇದು ತುಂಬ ಸಣ್ಣ ಗ್ರಂಥ. ಇದರಲ್ಲಿ ಗಯಾಶ್ರಾದ್ಧಕ್ಕೆ ಸಂಬಂಧಪಟ್ಟ ವಿಷಯ ನಿರೂಪಣೆಯಿದೆ.

**ವರ್ಷಕೃತ್ಯ:** ಇದರಲ್ಲಿ ವರ್ಷದಲ್ಲಿ ಬರುವ ಹಬ್ಬ ಹರಿ ದಿನಗಳ, ವ್ರತೋತ್ಸವಗಳ, ಕ್ರಮ ವರ್ಣನೆಯಿದೆ.

**ಮಣಿಮಂಜರೀ:** ಇದೊಂದು ಸಂಕ್ಷಿಪ್ತ ನಾಟಕ. ಇದರಲ್ಲಿ ರಾಜಾ ಚಂದ್ರಸೇನ ಮತ್ತು ಮಣಿಮಂಜರಿಯ ಕಥೆ ಯಿದೆ. ಗ್ರಂಥಾರಂಭದಲ್ಲಿ ಅರ್ಧ ನಾರೀಶ್ವರನ ಸ್ತುತಿಯಿದೆ. ಸಂಸ್ಕೃತದ ಈ ಕೃತಿಗಳಲ್ಲೆಲ್ಲ ವಿದ್ಯಾಪತಿ ಧರ್ಮ ಸಂಸ್ಥಾಪಕ

ನಾಗಿ ಸ್ಮೃತಿಕಾರನಾಗಿ, ನೀತಿ ಮತ್ತು ಲೋಕವಿದ ಪಂಡಿತನ ರೂಪದಲ್ಲಿ ಬರುತ್ತಾನೆ.

**ಅವಹಟ್ಟ ಭಾಷೆಯಲ್ಲಿ: ಕೀರ್ತಿಲತಾ :** ಮಹಾರಾಜ ಕೀರ್ತಿಸಿಂಹನ ಯಶೋಗಾನ ಮಾಡುವ ಈ ಚಂಪೂ ಕಾವ್ಯದಲ್ಲಿ ಗಣೇಶ್ವರನಮೃತ್ಯು, ಕೀರ್ತಿಸಿಂಹಮತ್ತು ಅವನ ಸೋದರ ಇವರು ಜೌನಪುರದ ಸುಲ್ತಾನನ ನೆರವಿನಿಂದಶತ್ರುವನ್ನು ಕೊಂದು ರಾಜ್ಯ ವನ್ನು ಮರಳಿ ಪಡೆಯುವುದು ಮೊದಲಾದವುಗಳ ವರ್ಣನೆಯಿದೆ. ಕಾವ್ಯ ಭೃಂಗ ಭೃಂಗಿಗಳ ಸಂವಾದ ಶೈಲಿಯಲ್ಲಿ ವರ್ಣಿತವಾಗಿದೆ

**ಕೀರ್ತಿಪತಾಕಾ :** ಇದರಲ್ಲಿ ಮಹಾರಾಜ ಶಿವಸಿಂಹನ ಕೀರ್ತಿಯ ವರ್ಣನೆಯಿದೆ. ಗ್ರಂಥ ದೋಹಾ ಮತ್ತು ಇತರ ಛಂದಸ್ಸುಗಳಲ್ಲಿದೆ. ನಡುನಡುವೆ ಕೊಂಚ ಗದ್ಯವೂ ಬರುತ್ತದೆ. ಶಿವಸಿಂಹನ ಶೃಂಗಾರ ವರ್ಣನೆ, ಯುದ್ಧ ವರ್ಣನೆ ಮೊದಲಾ ದವೂ ಇವೆ.

**ಮೈಥಿಲಿಯಲ್ಲಿ:—' ಪದಾವಳಿ '** : ಇದು ವಿದ್ಯಾಪತಿ ತನ್ನ ಬಾಲ್ಯದಿಂದ ಹಿಡಿದು ಮುಪ್ಪಿನವರೆಗೆ ವಿವಿಧ ಪ್ರಸಂಗಗ ಳಲ್ಲಿ ಬರೆದ ಗೇಯ ಪದಗಳ ಸಂಗ್ರಹ. ವಿದ್ಯಾಪತಿಯ ಕೀರ್ತಿಲತೆ ಹಬ್ಬಿರುವುದು ಅವನ ಈ ಗೇಯ ಪದಗಳ ಮೇಲೇ. ಇವು ದಾಸರ ಪದಗಳಂತೆ ಸಂಗೀತ ಶಾಸ್ತ್ರದ ನಿಯಮಾನುಸಾರ ರಾಗ ತಾಳಬದ್ಧವಾಗಿ ರಚಿತವಾಗಿವೆ. ಇಂಥ ಪದಗಳು ಒಂದು ಸಾವಿರಕ್ಕೂ ಮಿಕ್ಕಿವೆ. ವಿದ್ಯಾಪತಿಯ ಸಮಸ್ತ ಶಕ್ತಿಯೂ ಈ

ಕೀರ್ತನೆಗಳಲ್ಲಿ ಚೆಲ್ಲವರಿದಿದೆ. ಈ ಪದಗಳನ್ನೂ ಮೂರು ಗುಂಪುಗಳಾಗಿ ವಿಂಗಡಿಸಬಹುದು.

**ಶೃಂಗಾರ ಗೀತಗಳು :** ಇದರಲ್ಲಿ ರಾಧಾಮಾಧವರ ಪ್ರೇಮ, ವಿರಹ, ಮಿಲನಗಳ ಅನ್ಯಾದೃಶ್ಯ ರಮಣೀಯ ಚಿತ್ರಗಳಿವೆ. ಇವುಗಳಲ್ಲಿ ಕೆಲವಾದರೂ ಆಧ್ಯಾತ್ಮಿಕ ಶೃಂಗಾರದ ಅನುಭಾವದ ಗೀತೆಗಳಿರಬೇಕು.

**ಭಕ್ತಿಗೀತಗಳು :** ಈ ಗೀತಗಳಲ್ಲಿ ಶಿವ, ಶಕ್ತಿ, ಹರಿಹರ ಮೊದಲಾದವರ ಸ್ತೋತ್ರಗಳಿವೆ.

**ವಿವಿಧ ಗೀತಗಳು :** ಈ ಗೀತಗಳಲ್ಲಿ ಸಮಕಾಲೀನ ಜೀವನ ಚಿತ್ರವಿದೆ. ಇವಲ್ಲದೆ ಒಗಟಿನಂತಹ, ಮುಂಡಿಗೆಯಂತಹ ಕೆಲವು ಪದಗಳೂ ಇವೆ.

**ಗೋರಕ್ಷ ವಿಜಯ :-** ಇದು ನಾಲ್ಕು ಅಂಕಗಳ ಒಂದು ನಾಟಕ. ಇದರಲ್ಲಿ ಗದ್ಯ ಸಂಸ್ಕೃತ ಹಾಗೂ ಪ್ರಾಕೃತದಲ್ಲಿದೆ. ಗೀತಗಳು ಮೈಥಿಲಿಯಲ್ಲಿವೆ. ಇದರ ಕಥೆ ಗೋರಕ್ಷನಾಥ ಮತ್ತು ಮತ್ಸ್ಯೇಂದ್ರನಾಥರಿಗೆ ಸಂಬಂಧಿಸಿದೆ. ನಾಟಕದ ಶೈಲಿ ಅತ್ಯಂತ ಪ್ರೌಢವಾಗಿದೆ.

ವಿದ್ಯಾಪತಿ ಸಂಸ್ಕೃತದಲ್ಲಿ ಕಾವ್ಯರಚನೆ ಮಾಡಿದ್ದರೂ ಅವನ ಒಲವೆಲ್ಲ ದೇಶಭಾಷೆಯತ್ತಲೇ. 'ಕೀರ್ತಿಲತಾ'ದಲ್ಲಿ ಅವನು ಹೀಗೆ ಹೇಳುತ್ತಾನೆ.

" ಸಕ್ಕಯ ವಾಣೀ ಬುಹಜನ ಭಾವಇ

ಪಾಉಂಅ ರಸಕೋ ಮಮ್ಮ ನ ಪಾವಇ
ದೇಸಿಲ ವಯನಾ ಸಬ್ ಜನ ಮಿಟ್ಠಾ
ತೇ ತೈಸನ ಜಂಪ ಓಂ ಅವಹಟ್ಠಾ "*

"ಸಂಸ್ಕೃತ ಪಂಡಿತರಿಗೆ ಮಾತ್ರ ಒಪ್ಪುತ್ತದೆ. ಪ್ರಾಕೃತ ರಸದ ಮರ್ಮವನ್ನು ಮುಟ್ಟಲಾರದು. ದೇಶೀ ಭಾಷೆ ಸರ್ವ ಮಧುರ. ಆದ್ದರಿಂದ ನಾನು ಅವಹಟ್ಟ ಭಾಷೆಯಲ್ಲಿ ಬರೆಯು ತ್ತಿದ್ದೇನೆ."

ಅಷ್ಟೇ ಅಲ್ಲ ಅವನಿಗೆ ತನ್ನ ಸಂಸ್ಕೃತ ಪಾಂಡಿತ್ಯಕ್ಕಿಂತ ಈ ದೇಶಿಯ ಮೇಲೇ ಹೆಮ್ಮೆ. ಸಂಸ್ಕೃತದ ಘನವಿದ್ವಾಂಸ ನೊಬ್ಬನ ಈ ದೇಶಭಾಷಾ ಪ್ರೇಮ ನಿಜಕ್ಕೂ ಆಶ್ಚರ್ಯಕರ, ಕ್ರಾಂತಿಕಾರಿ.

ಅವನು ತನ್ನ ದೇಶಿಯನ್ನು ಬಾಲಚಂದ್ರನಿಗೆ ಹೋಲಿಸಿ ಅದು ಸಹೃದಯರ ಹೃದಯಹಾರಿ ಎನ್ನುತ್ತಾನೆ.

ಬಾಲಚಂದ ವಿಜ್ಜಾವಇ ಭಾಸಾ |
ದುಹೂಂ ನಹಿಂ ಲಗ್ಗಇ ದುಜ್ಜನ ಹಾಸಾ |
ಓ ಪರಮೇಸರಹರಸಿರ ಸೋಹಇ |
ಈ ಣಿಚ್ಚಇ ನಾಅರ ಮನ ಮೋಹಇ ||†

ವಿದ್ಯಾಪತಿಯ ಭಾಷೆ ಬಾಲಚಂದ್ರನಂತೆ ಮನೋಹರ. ಇವೆರಡಕ್ಕೂ ದುರ್ಜನರ ಅಪಹಾಸ್ಯ ತಗುಲದು. ಚಂದ್ರ

---

*ಕೀರ್ತಿಲತಾ— ಪ್ರಥಮಪಲ್ಲವ. † ಕೀರ್ತಿಲತಾ ಪ್ರಥಮ ಪಲ್ಲವ,

ಪರಮೇಶ್ವರ ಶಿವನ ತಲೆಯ ಮೇಲೆ ಮೆರೆದರೆ ವಿದ್ಯಾಪತಿಯ ವಾಣಿ ನಿತ್ಯವೂ ನಾಗರಿಕ (ಸಹೃದಯ) ಜನರ ಮನವನ್ನು ಶೋಹಿಸುತ್ತದೆ.

ಇದರಿಂದ ವಿದ್ಯಾಪತಿಯ ಹೊತ್ತಿಗಾಗಲೇ ಪ್ರಾಕೃತ ಗತ ವೈಭವವಾಗಿ ಹೋಗಿತ್ತು, ಸಂಸ್ಕೃತ ಬೆರಳೆಣಿಸುವಷ್ಟು ಮಂದಿಯ ಮಟ್ಟಿಗೆ ಸೀಮಿತವಾಗಿತ್ತು, ದೇಶೀ ಮಿಶ್ರಿತ ಅಪ ಭ್ರಂಶ ನಾಗರಿಕ ಜನರಿಗೆ ಪ್ರಿಯವಾಗಿತ್ತು ಮತ್ತು ಮೈಥಿಲಿ ದೇಶದಲ್ಲೆಲ್ಲ ನಲಿಯುತ್ತಿತ್ತು ಎನ್ನುವುದು ಸ್ಪಷ್ಟ. ಬಹುಶಃ ಆ ದೇಶ ಭಾಷೆಯ ಜಾನಪದ ಗೀತಗಳಲ್ಲಿ ರಾಧಾಕೃಷ್ಣರ ಪ್ರೇಮ ಲೀಲಾವಿನೋದಗಳ ಕಥನ ವಿದ್ದಿರಬೇಕು. ವಿದ್ಯಾಪತಿ ಅವುಗಳ ಮಟ್ಟು, ಲಯಗಳನ್ನನುಸರಿಸಿರಬೇಕು. ಇದಲ್ಲದೆ ಜಯದೇವನ ಗೀತಗೋವಿಂದ ಅವನ ಮುಂದೆ ಮಾದರಿಯಾಗಿತ್ತು. ಇದೂ ಕೂಡ ಮೊದಲು ಲೋಕಭಾಷೆಯಲ್ಲಿದ್ದು ಅನಂತರ ಸಂಸ್ಕೃತಕ್ಕೆ ಭಾಷಾಂತರಗೊಂಡಿರಬೇಕೆಂದು ಕೆಲವು ವಿದ್ವಾಂಸರು ಅಭಿ ಪ್ರಾಯಪಡುತ್ತಾರೆ. ಆದೇನಾದರೂ ಆಗಲಿ ವಿದ್ಯಾಪತಿ 'ಗೀತ ಗೋವಿಂದ'ವನ್ನು ಹಲವು ದೃಷ್ಟಿಯಲ್ಲಿ ಅನುಸರಿಸಿದ್ದಾನೆ.

ಜಯದೇವ ತನ್ನ 'ಗೀತಗೋವಿಂದ'ದಲ್ಲಿ ಹಾಡಿದ:

"ಯದಿ ಹರಿಸ್ಮರಣೇ ಸರಸಂ ಮನೋ ಯದಿ ವಿಲಾಸಕಲಾಸು
ಕುತೂಹಲಂ,
ಮಧುರ ಕೋಮಲ ಪದಾವಲೀಂ ಶೃಣುತದಾಜಯದೇವ
ಸರಸ್ವತೀಂ"

---

೨ ಗೀತಗೋವಿಂದ ಶ್ಲೋಕ : ೩

ಜಯದೇವ ಹರಿಸ್ಮರಣೆಯ ಜೊತೆಗೆ ವಿಲಾಸ ಕಲಾ ಕೌತೂಹಲ ಶಮನವನ್ನೂ ತನ್ನ ಕಾವ್ಯೋದ್ದೇಶವನ್ನಾಗಿ ಮಾಡಿಕೊಂಡಿದ್ದಾನೆ. ಈ ರೀತಿ ಭಕ್ತಿ ಮತ್ತು ಶೃಂಗಾರದ ಸಂಮಿಳನ ಜಯದೇವನಿಂದಲೇ ಆರಂಭವಾಗುತ್ತದೆ. ವಿದ್ಯಾಪತಿ ಇದನ್ನೇ ಮಾದರಿಯಾಗಿ ಅಂಗೀಕರಿಸಿದ. ಮಧುರ ಕೋಮಲ ಪದಾವಲಿಗೂ ಕೂಡ ವಿದ್ಯಾಪತಿ ಜಯದೇವನಿಂದಲೇ ಸ್ಫೂರ್ತಿ ಪಡೆದಿರಬೇಕು.

ಭಕ್ತಿಯ ಚರಮ ಸಾಧನೆಯನ್ನು ಮುಟ್ಟಲು ಸಾಧಕ ಅನೇಕ ಸೋಪಾನಗಳನ್ನು ಹಾದು ಹೋಗಬೇಕಾಗುತ್ತದೆ. ಭಾಗವತದ ಒಂದು ಶ್ಲೋಕದಲ್ಲಿ ಶ್ರದ್ಧೆ ಮತ್ತು ರತಿ ಇವು ಕ್ರಮವಾಗಿ ಭಕ್ತಿಯ ಸೋಪಾನಗಳೆಂದು ಹೇಳಿದೆ.

"ಸತಾಂ ಪ್ರಸಂಗಾನ್ಮಮ ವೀರ್ಯ ಸಂವಿದೋ ಭವನ್ತಿ
ಹೃತ್ಕರ್ಣ ರಸಾಯನಾಃ ಕಥಾಃ
ತಜ್ಜೋಷಣಾದಾಶ್ವಪವರ್ಗವರ್ತ್ಮನಿ ಶ್ರದ್ಧಾ ರತಿರ್ಭಕ್ತಿರನು
ಕ್ರಮಿಷ್ಯತಿ ||*

ಈ ರೀತಿ ವಿದ್ಯಾಪತಿ ತನಗಿಂತ ಬಹು ಹಿಂದಿನಿಂದ ನಡೆದು ಬಂದ ಪರಂಪರೆಯನ್ನು ಇನ್ನೂ ಹೆಚ್ಚು ವಿಕಾಸಗೊಳಿಸಿ ಅದನ್ನು ಶಿಖರಕ್ಕೇರಿಸಿದ. ವಿದ್ಯಾಪತಿಯ ಈ ಶೃಂಗಾರಮಯ ಭಕ್ತಿ ಮಿಥಿಲೆಯಿಂದ ಬಂಗಾಳಕ್ಕೂ ಹಬ್ಬಿದೆ. ಬಂಗಾಳದಲ್ಲಿ 'ಗೀತ

---

*ಭಾಗವತ-೩-೨೦/೨೨

ಗೋವಿಂದ'ದ ಪ್ರಭಾವದಿಂದ ಈ ಮೊದಲೇ ಇಂಥ ಭಕ್ತಿಗೆ ಇಂಬು ದೊರೆತ್ತಿತ್ತು. ವಿದ್ಯಾಪತಿಯ ಗೀತಗಳನ್ನು ಬಂಗಾಳೀ ಜನತೆ ಭಕ್ತಿ ಗೀತೆಗಳನ್ನಾಗಿ ಅಂಗೀಕರಿಸಿತು. ಚೈತನ್ಯ ಮಹಾ ಪ್ರಭು ವಿದ್ಯಾಪತಿಯ ಗೀತಗಳನ್ನು ಕೇಳಿ ಮೈಮರೆಯುತ್ತಿದ್ದ ನಂತೆ. ಚೈತನ್ಯ ಚರಿತಾಮೃತದಲ್ಲಿ ಹೀಗೆ ಹೇಳಿದೆ.

"ವಿದ್ಯಾಪತಿ ಚಂಡೀದಾಸ ಶ್ರೀ ಗೀತಗೋವಿಂದ
ಏಇ ತೀನ್ ಗೀತೇ ಕರಾಯ ಪ್ರಭುರ ಅನಂದ"

ವಿದ್ಯಾಪತಿ, ಚಂಡೀದಾಸ ಮತ್ತು ಗೀತಗೋವಿಂದ ಈ ಮೂರು ವ್ಯಕ್ತಿ ಕೃತಿಗಳ ಗೀತೆಗಳು ಪ್ರಭುವಿಗೆ ಆನಂದನೀಡಿದವು. ಗೌಡೀಯ ವೈಷ್ಣವರ ನಂಬಿಕೆಯ ಪ್ರಕಾರ ಚೈತನ್ಯ ಮಹಾ ಪ್ರಭು ಹುಟ್ಟುವುದಕ್ಕಿಂತ ಮುಂಚೆ ಈ ಭೂಮಿಗೆ ಬಂದು ರಾಧಾಕೃಷ್ಣರ ಪ್ರೇಮಭಕ್ತಿಯ ಹಾಡುಗಳನ್ನು ಬರೆಯಲೆಂದೇ ವಿದ್ಯಾಪತಿಯ ಜನನವಾಯಿತಂತೆ.

ಇದರ ಅರ್ಥ ಇಷ್ಟೆ. ವಿದ್ಯಾಪತಿಯ ಗೀತಗಳಲ್ಲಿ ರಾಧಾ ಕೃಷ್ಣರ ಪ್ರೇಮ ಭಕ್ತಿಯ ನಿರೂಪಣೆಗೇ ಪ್ರಾಧಾನ್ಯ.

ವಿದ್ಯಾಪತಿ ಸೌಂದರ್ಯದ ಅನನ್ಯ ಉಪಾಸಕ. ಆತನು ಸೌಂದರ್ಯವನ್ನು ಕಂಡುಂಡಷ್ಟು ಬೇರಾರೂ ಕಂಡಿರಲಾರರು. ಸೌಂದರ್ಯದ ಮಾಯವೀಯ ರೂಪದತ್ತ ಆಕರ್ಷಿತವಾಗುವ ಜೀವವಲ್ಲಅವನದು. ಸೌಂದರ್ಯದ ಮಾಂಸಲರೂಪವನ್ನು ಸ್ಥೂಲರೂಪವನ್ನೇ ಆತ ಚಿತ್ರಿಸಿದ್ದಾನೆ. ಸೌಂದರ್ಯ ಅವನಿಗೆ

ಎಲ್ಲಕ್ಕಿಂತಲೂ ಮಿಗಿಲಾದ ಧರ್ಮ, ಕರ್ಮ. ಅದು ಆತನ ಕಣ್ಣ ಮುಂದೆ ನಾನಾ ರೂಪಗಳಲ್ಲಿ ಸುಳಿಯುತ್ತದೆ. ಈ ಚೆಲವನ್ನು ಎದುರುಗೊಳ್ಳುವುದರಲ್ಲಿ ಆತನಿಗೆ ಎಲ್ಲಿಲ್ಲದ ಚಚ್ಚರ. ಸೌಂದರ್ಯ ವಿರುವುದು ಕಾಣುವ ಕಣ್ಣಿನಲ್ಲಿ. ಅಂಥ ಕಣ್ಣು ಆತನಿಗಿತ್ತು. ಈ ಸೌಂದರ್ಯವನ್ನು ಆತ 'ಅಪರೂಪ' ಎಂದು ಕರೆದಿದ್ದಾನೆ. ಈ ಅಪರೂಪ ಮನುಷ್ಯನ ಮನದಲ್ಲಿ ಪುಲಕವನ್ನು ಪ್ರಾಣದಲ್ಲಿ ಶಕ್ತಿಯನ್ನು ಶರೀರದಲ್ಲಿ ರೋಮಾಂಚವನ್ನು ತುಂಬಬಲ್ಲದು; ಸೃಷ್ಟಿಯ ಅಣು ರೇಣು ತೃಣಕಾಷ್ಠಗಳಲ್ಲಿ ನೂತನ ಚೇತನ ವನ್ನು ಹರಿಸಬಲ್ಲದು. ಈ ಸೌಂದರ್ಯದ ಮಿಗಿಲಾದ ವೈಶಿಷ್ಟ ಚಿರನೂತನತೆ. ವಿದ್ಯಾಪತಿ ಹೇಳುತ್ತಾನೆ ನಾನು ನಿನ್ನ ಈ ರೂಪವನ್ನು ಅದೆಷ್ಟು ಜನ್ಮ ಜನ್ಮಾಂತರಗಳಿಂದ ಕಾಣುತ್ತ ಇದ್ದೇನೋ! ಆದರೂ ಕಣ್ಣಿಗೆ ಮಾತ್ರ ತೃಪ್ತಿಯಿಲ್ಲ. ಅವನ ಈ ಚಿರಂತನ ಅತೃಪ್ತಿಯನ್ನು ಅವನ ಬಾಯಿಂದಲೇ ಕೇಳಬೇಕು.

ವಿದ್ಯಾಪತಿಯ ನಾಯಿಕೆ ಹೇಳುತ್ತಾಳೆ "ಸಖಿ ನನ್ನ ಅನುಭವವನ್ನು ಏನು ಕೇಳುತ್ತೀಯೆ? ಕ್ಷಣ ಕ್ಷಣವೂ ನವೋ ನವವಾಗಿ ಕಾಣುವ ಪ್ರೀತಿಯನ್ನೇ ಅನುರಾಗ ಎಂದು ಕರೆಯು ತ್ತಾರೆ. ನಾನು ಜನ್ಮ ಪೂರ್ತಿ ಆತನ ರೂಪವನ್ನು ವೀಕ್ಷಿಸಿದೆ. ಆದರೆ ಕಣ್ಣು ಮಾತ್ರ ತಣಿಯಲಿಲ್ಲ. ನಲ್ಲನ ಇನಿವಾತನ್ನು ಅದೆಷ್ಟೊಂದು ಸಾರಿ ನಾನು ಕಿವಿಯಾರ ಕೇಳಿದ್ದೇನೆ! ಆದರೆ ಶ್ರುತಿಪಥದಿಂದ ಅದನ್ನು ಮುಟ್ಟಲೇ ಇಲ್ಲವೋ ಎನ್ನಿಸುತ್ತದೆ. ಅದೆಷ್ಟೊಂದು ಮಧುಯಾಮಿನಿಗಳನ್ನು ಆತನೊಡನೆ ಕೇಳಿಯಲ್ಲಿ ಕಳೆದಿದ್ದೇನೆ.ಆದರೂ 'ಕೇಳಿ' ಎಂದರೇನೆಂಬುದೇ ಅರಿವಾಗದು,

ಲಕ್ಷ ಲಕ್ಷ ಯುಗಗಳ ವರೆಗೆ ಹೃದಯ ತೆತ್ತುದಾಯಿತು. ಆದರೂ ಎದೆಯ ನೋವು ತೀರಲಿಲ್ಲ. ಈ ಅನುಭವದಲ್ಲಿ ಲೆಕ್ಕವಿಲ್ಲದಷ್ಟು ಮಂದಿ ಮುಳುಗಿದ್ದರು. ಆದರೆ ಅನುರಾಗದ ನೈಜ ಅನುಭವ ಯಾರಿಗೂ ಆಗಲಿಲ್ಲ.

" ಸಖಿ, ಕೀ ಪೂಛಸಿ ಅನುಭವ ಮೋಯೇ
ಸೇ ಹೋ ಪಿರೀತ ಅನುರಾಗ ಬಖಾನಿಯೇ ||
ತಿಲ ತಿಲ ನೂತನ ಹೋಯೇ "

ವಿದ್ಯಾಪತಿಯ ಈ 'ಗೀತ'ದ ಪ್ರಶಂಸೆಯಲ್ಲಿ ದಿನೇಶಚಂದ್ರ ಸೇನರು ಹೇಳುವ ಮಾತುಗಳನ್ನು ಗಮನಿಸಬೇಕು : " ಪ್ರೇಮದ ಚಿರಂತನ ಅತೃಪ್ತಿ, ಆದರ್ಶ ಮತ್ತು ವಾಸ್ತವಿಕತೆಯ ನಡುವಣ ಅಲಂಘ್ಯ ಅಂತರ, ಸೌಂದರ್ಯದ ಖಂಡ, ಆಂಶಿಕ ಆಕಾಶದಿಂದ ಅದರ ಮೂಲ ಸೆಲೆಯೆಡೆಗೆ ನಡೆಸುವ ಅನೂಹ್ಯ ಯಾತ್ರೆ, ರೂಪದ ಮೂಲಕ ರೂಪಾತೀತದ ವ್ಯಂಜನೆ, ಅನಾಯತ್ತದ ವ್ಯಾಕುಲ ಹಸ್ತಪ್ರಸಾರ–ಮೊದಲಾದ ಪ್ರೇಮದ ಕಡೆಯಿಲ್ಲದ ಮಹಿಮೆ, ಆಕರ್ಷಣೆ ಇವುಗಳ ಸ್ವರ ಈ ಕವಿತೆಯಲ್ಲಿ ಅಚ್ಚರಿಗೊಳಿಸುವ ರೀತಿಯಲ್ಲಿ ಮೂಡಿದೆ. ಈ ಕಾರಣಗಳಿಂದ ಈ ಭೂಮಿಯ ಶ್ರೇಷ್ಠಗೀತ ಸಮೂಹದಲ್ಲಿ ಇದಕ್ಕೆ ಸ್ಥಾನ ಸಲ್ಲಬೇಕು. *

ವಿದ್ಯಾಪತಿ ಈ 'ಅಪರೂಪ'ವನ್ನು 'ಜಿರಂತನ ಯೌವನ'

---

* ವಿದ್ಯಾಪತಿ ಕೀಪದಾವಲಿ. ಸಂ. ರಾಮವೃಕ್ಷ ಬೇನೀಪುರಿ. ಪದಸಂಖ್ಯೆ ರೂಪ ೧೬೬

'ಅಮ್ಲಾನ ಯೌವನ', 'ಅಭಿರಾಮ ಯೌವನ' ಎಂದು ಕರೆದಿದ್ದಾನೆ. ಈ ಚಿರ ನವೀನ ಸೌಂದರ್ಯವನ್ನು ಕಂಡು ವಿದ್ಯಾಪತಿ ಚೈತ್ರಕಾನನದಲ್ಲಿ ಮಾಮರವನ್ನು ಕಂಡು ಕುಕಿಲ್ವ ಕೋಗಿಲೆಯಂತೆ ಕೂಗುತ್ತಾನೆ: —

'ನವ ವೃಂದಾವನ ನವನವ ತರುಗಣ,
ನವನವ ವಿಕಸಿತ ಸುಮನ,
ನವಲವಸಂತ, ನವಲಮಲಯ ಪವನ!
ಮತ್ತವಾಗಿಹುದೆತ್ತಲೂ ನದನದೀತೀರ,
ವಿಹರಿಪನಲ್ಲಿ ನವಲ ಕಿಶೋರ
ಕಾಳಿಂದೀಕೂಲಪುಲಿನ ಕುಂಜವನಕೆ ಶೋಭನ,
ಎತ್ತಲೆತ್ತಲೂ ನವನವ ಪ್ರೇಮವಿನೋದ ಮಾದನ'!

ಜಗತ್ತಿನ ಎಲ್ಲ ವಸ್ತುಗಳಲ್ಲೂ ಸೌಂದರ್ಯವಿದೆ. ಆದರೆ ಆ ವಸ್ತುಗಳ ಆಧಾರವೊಂದರಿಂದಲೇ 'ಅಪರೂಪ'ದ ವರ್ಣನೆ ಅಸಂಭವ. ಕವಿ ಈ ಮಾಯಿಕ ಸೌಂದರ್ಯದ ಅನಿರ್ವಚನೀಯತೆಯನ್ನು ಹೀಗೆ ವರ್ಣಿಸುತ್ತಾನೆ:—

ಅಮೃತಲಹರಿಯನೊಸರುತಿಹುದು ಅರವಿಂದ,
ಮೂಡಿಹುದು ಕುಂದಕುಸುಮ, ಹವಳದಾ ಕುಡಿಯಿಂದ,
ಕಂಡು ಕಂಡು ತೀರದು ಮತ್ತೆ ಕಾಂಬರೂಪ ಸಿರಿಯು!
ಕಂಡೆನಾ ಕಾಂತಿಯ ಬಳ್ಳಿಯಲಿ ಸುಮೇರುಗಿರಿಯ,
ಹುಸಿಯಲ್ಲ, ನಿಜವ ಹೇಳುತಿರುವೆ ಸಾಕ್ಷಿ ಅನಂಗ,
ಚಂದಿರ ಮಂಡಲದಲಿ ನೋಡ ಯಮುನಾತರಂಗ
ಕೋಮಲ ಅಪರಂಜಿಯ ಓಲೆಗರಿಯ ಮೇಲೆ,

ಮುಃಖದಿಂದ ಬರೆದಿಹನು ಮದನ ತನ್ನ ಕಥೆಯ ಕೇಳೆ!
ತಿಳಿಯದಾಯಿತು, ವಾಚಿಸಲರಿಯಲದಾದೆ ಅಕ್ಕರಗಳ ಸಾಲ,
ಕಂಡು ಪುಲಕಿಗೊಂಡೆ ಏನು ಕಾಂತಿ ಜಾಲ!
ವಿದ್ಯಾಪತಿಯೆಂದ ಏನಪೇಳಲಿ, ಎಂತು ಪೇಳಲಿ ಏನು ವಿಭವ!
ಆರು ನಂಬುವರೀ ಚೋದ್ಯವ, ಅರ್ಥ ಅಸಂಭವ!*

ಸೌಂದರ್ಯ ವಿದ್ಯಾಪತಿಯ ಮನದಲ್ಲಿ ಉಲ್ಲಾಸಕ್ಕಿಂತ ಮಿಗಿಲಾಗಿ ದಾರುಣ ವೇದನೆಯನ್ನುಂಟು ಮಾಡುತ್ತದೆ. ಈ ವೇದನೆ ನೋವು ಸೌಂದರ್ಯದ ಶಾಶ್ವತ ಶಕ್ತಿ. ಕವಿ ಮತ್ತೆ ಮತ್ತೆ ಪ್ರಥಮದರ್ಶನಜನ್ಯ ವೈಚಿತ್ರ್ಯವನ್ನು ಬಣ್ಣಿಸುತ್ತಾನೆ. ಆ ವೈಚಿತ್ರ್ಯ ನಾಯಕ ನಾಯಿಕೆಯರ ಎದೆ ಭಯಂಕರ ವೇದನೆಯಿಂದ ಮರಗಟ್ಟುವಂತೆ ಮಾಡುತ್ತದೆ. ಈ ನೋವು ಸಾಧಾರಣ ಸೌಂದರ್ಯದಿಂದ ಮೂಡುವಂತಹುದಲ್ಲ. ವಿದ್ಯಾಪತಿ ನೂರಾರು ವಿಧವಾದ ರೂಪವನ್ನು ಕಂಡಿದ್ದ. ರಾಣಿಯರ, ರಾಜಕುವರಿಯರ, ನರ್ತಕಿಯರ, ಗ್ರಾಮಬಾಲೆಯರ, ಸದ್ಯಸ್ನಾತೆಯರಾದ ರಮಣಿಯರ, ಶೈಶವ ಯೌವನಗಳ ವಯಃಸಂಧಿಯಲ್ಲಿದ್ದ ಬಾಲೆಯರ ನವೋನವರೂಪವನ್ನು ಕಂಡಿದ್ದ. ಆದರೆ ಈ ರೂಪಗಳೆಲ್ಲ ಆತನ ಮನದಲ್ಲಿ ಎಂದಿಗೂ ತೀರದ ನೋವನ್ನು ಕೆರಳಿಸಿದವು. ಅದು ಮನದ ನೋವು, ದೇಹದ್ದಲ್ಲ. ಕವಿ ಹೇಳುತ್ತಾನೆ :—

“ಕನಸು ಮನಸಿನಲೂ ತಣಿಯಲಿಲ್ಲ ಮನದ ಬಯಕೆ, ಆಗಾಧ!
ಕಣ್ಣಾರೆ ಕಂಡೆನಾ ಚೆಲುವ ದೊರೆಯುಹರಿಯು, ಇದೆ ಎನ್ನಪರಾಧ!

* ವಿದ್ಯಾಪತಿ ಪದಾವಳಿ.

ಮಂದಭಾವ ಮರಿಯಲಿ ಬುಗಿ ಬುಗಿಲನೆ ಬೇಯುತಿದೆ ಬಗೆ,
ಹಣ್ಣು ಮಾಡಲೆನ್ನ ಜನಿಸಿಹುದೀ ಒಲುಮೆಯ ಹಗೆ !
ಮುಗ್ಧರೆನ್ನ ಸಖೀಜನ, ತಿಳಿಯದವರಿಗೆ ಇದರ ಮರ್ಮ !
ಬೇನೆಯೊಂದು, ಮದ್ದೊಂದು, ಇದೇನು ಕರ್ಮ !
ಮನಸಿಜ ಕೊಂಡುಹೋಗಿಹ ಮನದುಬ್ಬಸವ
ಮೈಯ ತೊರೆದು ಹಿಡಿದಿಹುದು ಬೇನೆ ಮಾನಸವ ||"

ಪ್ರೇಮ ವಿದ್ಯಾಪತಿಯ ಕಾವ್ಯಕ್ಕೆ ಬಹುದೊಡ್ಡ ಸ್ಫೂರ್ತಿ, ಪ್ರೇರಣೆಯ ಚಿರಂತನ ಚಿಲುಮೆ. ಆತ ಪ್ರೇಮದಲ್ಲಿ ಕುತ್ತಿಗೆಯ ವರೆಗೂ ಮುಳುಗಿದ್ದಾನೆ. ಸೌಂದರ್ಯೋಪಾಸಕನಾದ ಕವಿ ಪ್ರೇಮಿಯಾಗದಿರಲು ಸಾಧ್ಯವೇ ಇಲ್ಲ. ಈ ಪ್ರೇಮದ ಮರ್ಮ ವನ್ನು ಕವಿ ಹೀಗೆ ಹೇಳುತ್ತಾನೆ.:—

' ಸುಜನರ ಪ್ರೇಮಕೆ ಹೇಮಸಮ ತೂಕವಲೆ,
ತಪ್ತ ಕಾಂಚನದೊಲು ದ್ವಿಗುಣವದರ ಬೆಲೆ.
ದಂಟು ಕಿತ್ತರೂ ಕೀಳದು ಮೃಣಾಳದ ತಂತು,
ಕಿತ್ತರೂ ಕೀಳದು ಒಲುಮೆ ಇಂತು ಅಂತು !"

ಸುಜನರ ಪ್ರೇಮವೂ ಚಿನ್ನವೂ ಒಂದೇ ತೂಕ. ಅದು ವಿರಹದ ಬೆಂಕಿಯಲ್ಲಿ ಬೆಂದು ಬೆಂದು ಶುದ್ಧ ಅಪರಂಜಿಯಾಗಿದೆ. ಈ ಪ್ರೇಮ ಮೇಲು ನೋಟಕ್ಕೆ ಭಂಗವಾಗಿರುವಂತೆ ಕಾಣುತ್ತದೆ. ಪರಿಸ್ಥಿತಿ ಇಬ್ಬರನ್ನೂ ಬೇರ್ಪಡಿಸಬಹುದು. ಕಮಲನಾಳ ಕಿತ್ತರೂ ಅದರ ತಂತುಗಳು ಕೀಳವು. ಅಂತೆಯೇ ಈ ಪ್ರೇಮವೂ ಕೂಡ ಎಂದಿಗೂ ಭಂಗಗೊಳ್ಳದು.

ವಿದ್ಯಾಪತಿ ಪೂರ್ಣತಃ ಗೀತಾತ್ಮಕ ವ್ಯಕ್ತಿತ್ವವುಳ್ಳ ಕವಿ. ಸಂಗೀತದ ಮಾಯೆ ಮತ್ತು ಏಕಾಂತ ತಲ್ಲೀನತೆಯ ವ್ಯಕ್ತಿನಿಷ್ಠೆ ಇವೆರಡನ್ನೂ ಮೇಳಗೊಳಿಸುವ ತನ್ಮಯತೆ ಆತನಲ್ಲಿ ಸಹಜವಾಗಿತ್ತು. ಆತನ ಗೀತಗಳಲ್ಲಿ ಕ್ಷಣವನ್ನು ಚಿರಸ್ಥಾಯಿಗೊಳಿಸುವ ಭವನಿಮಜ್ಜನ ಚಾತುರಿ ಅದ್ಭುತ ಪರಿಮಾಣದಲ್ಲಿದೆ. ತನ್ನ ಮಾನವೀಯ ಅನುಭೂತಿ ಮತ್ತು ದೇಶ ಕಾಲ ನಿರಪೇಕ್ಷ ಕಲಾತ್ಮಕತೆಯ ಆಧಾರದ ಮೇಲೆ ಆತ ತನ್ನದೇ ಆದ ಒಂದು ವಿಲಕ್ಷಣ ವ್ಯಕ್ತಿತ್ವವನ್ನು ನಿರೂಪಿಸಿಕೊಂಡಿದ್ದಾನೆ. ಅದು ಭಕ್ತರಿಗೆ ಭಕ್ತಿಯ ಮಧುರಗಾನವನ್ನು ನೀಡಿದೆ; ರಸಿಕರಿಗೆ ಕಲಾಪೂರ್ಣ ಪ್ರಣಯದ ಭಾವ ಭಂಗಿಮೆಯನ್ನು ನೀಡಿದೆ ; ವೃದ್ಧರಿಗೆ ಆತ್ಮ ನಿವೇದನೆಯಿಂದ ತುಂಬಿದ ವೇದನೆ, ಸಂವೇದನೆಯನ್ನು ನೀಡಿದೆ.

ವಿದ್ಯಾಪತಿ ರಾಧಾಕೃಷ್ಣರನ್ನು ನಾಯಿಕೆ ನಾಯಕರ ರೂಪದಲ್ಲಿ ಚಿತ್ರಿಸಿದ್ದಾನೆ. ಕಥೆ ರಾಧೆಯ ವಯಸ್ಸಂಧಿಯಿಂದ ಆರಂಭವಾಗುತ್ತದೆ. ರಾಧೆ ಹರೆಯದ ಹಂತವನ್ನು ಹತ್ತುತ್ತಾಳೆ. ಕೃಷ್ಣ ಮೊದಲೇ ತರುಣ. ಕೆಲವು ಕೃಷ್ಣಕವಿಗಳಂತೆ ರಾಧೆಯನ್ನು ಕವಿ ಇಲ್ಲಿ ಕೃಷ್ಣನಿಗಿಂತ ದೊಡ್ಡವಳನ್ನಾಗಿ ಚಿತ್ರಿಸಿಲ್ಲ. ಆಕೆ ಇಲ್ಲಿ ಕೃಷ್ಣನಿಗಿಂತ ಕಿರಿಯವಳು. ಯೌವನೋದಯದ ವೇಳೆಗೆ ಸರಿಯಾಗಿ ದೂತಿಯರು ರಾಧೆಗೆ ಕೃಷ್ಣನ ಸುದ್ದಿ ತಿಳಿಸುತ್ತಾರೆ. ಕೃಷ್ಣನ ಬಳಿಗೆ ಹೋಗಿ ಅವರು ರಾಧೆಯ ಚೆಲುವನ್ನು ಬಣ್ಣಿಸುತ್ತಾರೆ. ಅನಂತರ ಪ್ರಥಮ ದರ್ಶನ ದೂದವಿಯರ ಪ್ರಯತ್ನದಿಂದ ನಡೆಯುತ್ತದೆ.

ಇದರ ತರುವಾಯ ರಾಧಾಕೃಷ್ಣರ ಪೂರ್ವರಾಗ. ಇಲ್ಲಿ ಕವಿ ದೂತಿಯರ ಮೂಲಕ ಇಬ್ಬರ ಚೆಲುವನ್ನೂ ವರ್ಣಿಸಿದ್ದಾನೆ. ಅನೇಕ ಉಪಮೆ, ಉತ್ಪ್ರೇಕ್ಷೆಗಳ ಮೂಲಕ ಕವಿ ರಾಧಾಮಾಧವರ ಸೌಂದರ್ಯವನ್ನು ಇನ್ನಿಲ್ಲದಂತೆ ಬಣ್ಣಿಸಿದ್ದಾನೆ. ದೂತಿ ರಾಧೆಯನ್ನು ಅಭಿಸಾರಕ್ಕೆ ಸಜ್ಜುಗೊಳಿಸುತ್ತಾಳೆ. ಕೃಷ್ಣನಿಗೆ ಅದರ ಸುದ್ದಿ ಮುಟ್ಟಿಸುತ್ತಾಳೆ. ಅನಂತರ ರಾಧಾಕೃಷ್ಣರ ಮಿಲನ.

ಅಲ್ಲಿಂದ ಹಿಂತಿರುಗಿ ಬಂದ ರಾಧೆ ಸಖಿಯರೊಡನೆ ತನ್ನ ಪ್ರಥಮಾನುಭವವನ್ನು ಹೇಳಿಕೊಳ್ಳುತ್ತಾಳೆ. ಕೃಷ್ಣ ಅವಳೊಡನೆ ಹೇಗೆ ವರ್ತಿಸಿದ, ಅವಳ ಮೇಲೆ ಅವನ ಪ್ರಭಾವ ಎಂತಹುದು ಮೊದಲಾದ ವಿವರಗಳನ್ನು ಅವಳು ನೀಡುತ್ತಾಳೆ. ಮಿಲನೋತ್ಸಾಹ, ಸಂಭ್ರಮ ಇಲ್ಲಿಗೆ ಮುಗಿಯಿತು.

ಇದಾದ ಮೇಲೆ 'ಮಾನ'. ಕೃಷ್ಣನ ಮೈಮೇಲೆ ಅನ್ಯಸ್ತ್ರೀ ಸಂಗದ ಕುರುಹನ್ನು ಕಂಡು ಅವಳು ಮುನಿಯುತ್ತಾಳೆ. ಈ ಮುನಿಸೇ ಮಾನ. 'ಮಾನ' ಪ್ರಸಂಗದಲ್ಲಿ ದೂತಿಯರು ತುಂಬ ಚಾಕಚಕ್ಯದಿಂದ ವರ್ತಿಸುತ್ತಾರೆ. ಅದರ ಫಲವಾಗಿ ಅವಳ, ಮುನಿಸು ತಿಳಿಯುತ್ತದೆ. ಮುನಿಸು ತಿಳಿದಮೇಲೆ ಅವರ ಪುನರ್ಮಿಲನ. ಕೃಷ್ಣ ರಾಧೆಯ ಕೋಪವನ್ನು ಶಮನಮಾಡಲು ಅನುನಯ ವಿನಯದಿಂದ, ದೈನ್ಯದಿಂದ ವರ್ತಿಸುತ್ತಾನೆ. ಅಭಿಸಾರ ನಡೆಯುತ್ತದೆ. ರಾಧಾಕೃಷ್ಣರು ಕುಂಜಗಳಲ್ಲಿ ಕಲೆಯುತ್ತಾರೆ. ಆದರೆ ನಲ್ಲನ ಮಿಲನದಲ್ಲೂ ರಾಧೆಗೆ ತಳ್ಳಂಕ ತಪ್ಪಲಿಲ್ಲ. ಅವಳಿಗೆ ಪುರಜನ, ಪರಿಜನರ ಭೀತಿ.

ಕೆಲಕಾಲ ಕಳೆದ ಬಳಿಕ ಕೃಷ್ಣ ತಾನು ಗೋಕುಲವನ್ನು ಬಿಟ್ಟು ಮಥುರೆಗೆ ತೆರಳುವ ವೃತಾಂತವನ್ನು ಆಕೆಗೆ ತಿಳಿಸುತ್ತಾನೆ. ಅದನ್ನು ಕೇಳಿ ರಾಧೆಯ ಕಳವಳ, ತಳಮಳ ಹೇಳತೀರದು. ಅವಳು ಸಿಡಿಮಿಡಿ ಗೊಳ್ಳುತ್ತಾಳೆ; ಮೌನತಳೆದು ಬಿಡುತ್ತಾಳೆ. ಆದರೆ ಯಾರ ನೋವಿಗೂ ಅಳುಕದೆ ಹೊರಡುವ ರಾಜಕಾರಣ ಕೃಷ್ಣನಿಗೆ. ಕೊನೆಗೆ ಅವನು ವಿಧಿಯಿಲ್ಲದೆ ಮಥುರೆಗೆ ಹೊರಟು ಹೋಗುತ್ತಾನೆ. ರಾಧೆ ವಿರಹದ ದುಸ್ತರ ಸಾಗರದಲ್ಲಿ ಮುಳುಗುತ್ತಾಳೆ. ಸಖಿಯರು ಅವಳನ್ನು ನಾನಾ ವಿಧವಾಗಿ ಸಂತೈಸುತ್ತಾರೆ. ಆದರೆ ಏನೂ ಫಲವಿಲ್ಲ. ರಾಧೆಯ ಸಂಕಟವನ್ನು ನೋಡಲಾದರೆ ಅವರು ಮಥುರೆಗೆ ಹೋಗಿ ಕೃಷ್ಣನಿಗೆ ಅವಳ ಸಂದೇಶವನ್ನು ಮುಟ್ಟಿಸುತ್ತಾರೆ. ಅದನ್ನು ಕೇಳಿ ಕೃಷ್ಣ ತಲ್ಲಣಿಸಿ ಹೋಗುತ್ತಾನೆ. ಅವನ ನೋವು ಮರುಕೊಳಿಸುತ್ತದೆ. ಬಿಸುಸುಯ್ದು ಅವನು ಹೇಳುತ್ತಾನೆ "ರಾಧೆಯ ಅಗಲಿಕೆಯನ್ನು ಹೇಗೆ ತಾನೆ ಮರೆಯಲಿ? ರಾಜ ವೈಭವ, ಒಡ್ಡೋಲಗ, ಅಷ್ಟೈಶ್ವರ್ಯಗಳ ನಡುವೆ ಇದ್ದರೂ ನಾನು ವಿರಾಗಿಯಂತಿದ್ದೇನೆ. ನನಗೆ ಅವಳದೇ ಹಂಬಲ."

ದೂತಿಯರು ಹಿಂದಿರುಗಿ ಮಾಧವನ ವಿರಹವನ್ನು ರಾಧೆಗೆ ಅರುಹುತ್ತಾರೆ. ಅನಂತರ ರಾಧಾಕೃಷ್ಣರ ಪುನಸ್ಸಮಾಗಮವಾಗುತ್ತದೆ. ಈ ಮಿಲನ ಒಮ್ಮೆ ದೈಹಿಕವಾದರೆ, ಒಮ್ಮೆ ಕನಸಿನಲ್ಲಿ ನಡೆಯುತ್ತದೆ.

ಕಥೆ ಇಷ್ಟೆ. ಆದರೆ ಕಥೆಗಿಂತ ಇಲ್ಲಿ ವ್ಯಥೆ ಹೆಚ್ಚು. ಇಷ್ಟು

ಚಿಕ್ಕ ಕಥಾನಕದಲ್ಲಿ ಕವಿ ಸಂಯೋಗ ಮತ್ತು ವಿಪ್ರಲಂಭ ಶೃಂಗಾರದ ಎಲ್ಲ ಪ್ರಸಂಗಗಳನ್ನು ಅತ್ಯಂತ ಸವಿರಾಗಿ ಚಿತ್ರಿಸಿದ್ದಾನೆ. ವಿದ್ಯಾಪತಿ ಇಲ್ಲಿ ಮೂಲಕಥೆಯಿಂದ ಶೃಂಗಾರಕ್ಕೆ ಪೋಷಕವಾಗುವ ಸನ್ನಿವೇಶಗಳನ್ನು ಮಾತ್ರ ಆಯ್ದುಕೊಂಡಿದ್ದಾನೆ. ಈ ಪ್ರಸಂಗಗಳಲೆಲ್ಲ ದೂತಿಯರಿಗೆ ವಿಶೇಷ ಮಹತ್ವ ದೊರೆತಿರುವುದು ಗಮನಾರ್ಹ. ಮಾನ, ಅಭಿಸಾರ, ಮಿಲನ, ಮೊದಲಾದ ಶೃಂಗಾರ ಪ್ರಸಂಗಗಳಲ್ಲಿ ದೂತಿಯ ನೆರವು ಅತ್ಯಗತ್ಯ. ದೂತಿಯರು ರಾಧೆಯ ಸಂದೇಶವನ್ನು ಹೊತ್ತು ಮಥುರೆಗೆ ಹೋಗುವ ಪ್ರಸಂಗ ಭಾಗವತದಲ್ಲಿಲ್ಲ. ಕೃಷ್ಣ ಮಥುರೆಯಿಂದ ಬೃಂದಾವನಕ್ಕೆ ಮರಳಿಬರುವ ಪ್ರಸಂಗವೂ ಭಾಗವತದಲ್ಲಿಲ್ಲ. ವಿರಹ ಮಿಲನದಲ್ಲಿ ಪರ್ಯವಸಾನಗೊಳ್ಳಲಿ ಎಂದು ಕವಿ ಸ್ವಂತವಾಗಿ ಕಲ್ಪಿಸಿರಬೇಕು. ಭಾಗವತದಲ್ಲಿ ರಾಧೆಯ ಹೆಸರು ಸಹ ಇಲ್ಲ. ಅವಳ ಬದಲಿಗೆ ಹಲವು ಮಂದಿ ಗೋಪಿಯರು ಬರುತ್ತಾರೆ. ಅಲ್ಲಿ ಕೃಷ್ಣ ಮತ್ತು ಗೋಪಿಯರ ಪುನರ್ಮಿಲನ ಮಹಾಭಾರತಯುದ್ಧದ ತರುವಾಯ ನಡೆಯುತ್ತದೆ. ಅಲ್ಲಿ ಭ್ರಮರ ಗೀತ ಮತ್ತು ಉದ್ಧವ ಪ್ರಸಂಗಗಳಿವೆ. ವಿದ್ಯಾಪತಿ ಉದ್ಧವನ ಹೆಸರನ್ನೇನೋ ಹೇಳಿದ್ದಾನೆ. ಆದರೆ ಸೂರದಾಸರ ಭ್ರಮರ ಗೀತದಲ್ಲಿರುವಂತೆ ಅವನನ್ನು ಬೃಂದಾವನಕ್ಕೆ ಕಳುಹಿಸುವ ಅವನಿಂದ ಗೋಪಿಯರಿಗೆ ಜ್ಞಾನೋಪದೇಶ ಮಾಡಿಸುವ ಪ್ರಸಂಗಗಳು ಆತನ ಕಾವ್ಯದಲ್ಲಿಲ್ಲ.

ರಾಧಾಕೃಷ್ಣರ ಪ್ರೇಮಲೀಲೆಗಳನ್ನು ಕುರಿತು ವಿದ್ಯಾಪತಿ ಬರಿಯ ಹಾಡುಗಳನ್ನು ಬರೆದಿದ್ದಾನೆ. ಒಂದೊಂದೂ ಒಂದೊಂದು

ಮುಕ್ತಕ. ಕಾವ್ಯ ಮುಕ್ತಕ ರೂಪದಲ್ಲಿದ್ದರೂ ಮೇಲೆ ಹೇಳಿದ ಎಲ್ಲ ಪ್ರಸಂಗಗಳನ್ನು ಒಟ್ಟುಗೂಡಿಸಿದರೆ ಕಥೆಯು ಎಳೆಸಿಗುತ್ತದೆ.

ವಿದ್ಯಾಪತಿಯ ಕೃಷ್ಣ ಜಯದೇವನ ಕೃಷ್ಣನಿಗಿಂತ ಹೆಚ್ಚು ಭಿನ್ನನಲ್ಲ. ಆತ ಧೀರಲಲಿತ ದಕ್ಷಿಣ ನಾಯಕನಂತೆ ಚಿತ್ರಿತನಾಗಿದ್ದಾನೆ. ಕೃಷ್ಣ ನಮ್ಮ ಕಣ್ಣೆದುರಿಗೆ ಮೊತ್ತ ಮೊದಲು ಬರುವುದು ತರುಣನಂತೆ. ಅವನ ಬಾಲಲೀಲೆಗಳಿಗೆ ಇಲ್ಲಿ ಎಡೆಯಿಲ್ಲ. ತರುಣ ಕೃಷ್ಣನ ಚಿತ್ರ ಮಾತ್ರ ಕಣ್ಣಿಗೆ ಕಟ್ಟುವಂತಿದೆ:-

"ಅಭಿನವ ಜಲಧರಸುಂದರ ದೇಹ,
ಎಸೆಯುತಿಹುದು ಪಿತಾಂಬರ ಮಿಂಚಿನ ಗೇಹ!
ಹೊಳೆವುದು ಶ್ಯಾಮಲ ಕುಟಿಲ ಕೇಶ
ಕಾಡಿಗೆ ಕಣ್ಣು, ಕಂಗೊಳಿಪುದು ಮದನವೇಷ!"

ಕೃಷ್ಣನ ಪೂರ್ವರಾಗವನ್ನು ಕವಿ ಅತ್ಯಂತ ಮನೋಹಾರಿಯಾಗಿ ಚಿತ್ರಿಸಿದ್ದಾನೆ. ಕೃಷ್ಣ ಇಲ್ಲಿ ವಿಲಾಸಕೇಲಿಚತುರನಾಗಿ, ರತಿವಿಶಾರದನಾಗಿ ಬರುತ್ತಾನೆ, ನೀತಿವಿಶಾರದನಾಗಲ್ಲ, ಗೀತಾಚಾರ್ಯನಾಗಿ ಅಲ್ಲ.

ವಿದ್ಯಾಪತಿ ರಾಧೆಯನ್ನು ವಯಃಸಂಧಿಯ ಘಟ್ಟದಲ್ಲಿ ತಂದು ನಮ್ಮೆದುರಿಗೆ ನಿಲ್ಲಿಸುತ್ತಾನೆ. ಇದೂ ಕೂಡ ಆತನ ಸ್ವತಂತ್ರ ಕಲ್ಪನೆ. ಆತನಿಗಿಂತ ಮುಂಚೆ ಜಯದೇವ ರಾಧೆಯನ್ನು ಸಾಹಿತ್ಯ ಕ್ಷೇತ್ರದಲ್ಲಿ ತಂದು ನಿಲ್ಲಿಸಿದ್ದ. ಆದರೆ ಜಯದೇವನ ರಾಧೆ ಸಾಕಷ್ಟು ವಯಸ್ಸಾದವಳು; ಪ್ರಾಯಸಮರ್ಥೆ, ಕೇಳಿ ಚತುರೆ. ಆಕೆ ಛಲಬಲದಿಂದಲಾದರೂ ಕೃಷ್ಣನನ್ನು ವಶಪಡಿಸಿ

ಕೊಳ್ಳ ಬಯಸುತ್ತಾಳೆ. ವಿದ್ಯಾಪತಿಯು ರಾಧೆ ಇದೀಗ ಹರೆಯದ ಹೊಸ್ತಿಲಲ್ಲಿದ್ದಾಳೆ. ರಾಧೆಯು ಈ ಚಿತ್ರ ನಿಜಕ್ಕೂ ಹೊಸತು. ಅವಳು ಹುಡುಗಿಗೆ ಹುಡುಗಿಯೂ ಅಲ್ಲದ, ತರುಣಿಗೆ ತರುಣಿಯೂ ಅಲ್ಲದ ಸ್ಥಿತಿಯಲ್ಲಿದ್ದಾಳೆ. ಬಾಲ್ಯ ಇನ್ನೇನು ಮುಗಿಯುತ್ತ ಬಂದಿದೆ, ಯೌವನ ಅಡಿಯಿಡುತ್ತಿದೆ. ಇಂಥ ಸ್ಥಿತಿಯನ್ನು 'ವಯಃಸಂಧಿ' ಎಂದು ಕರೆಯುತ್ತಾರೆ. ಇದು ಆಂತರಿಕ ಹಾಗೂ ಬಾಹ್ಯ ಸಂಘರ್ಷದ ಸ್ಥಿತಿ. ಹೊರಗಡೆ ಶೈಶವ ಹಾಗೂ ಯೌವನಗಳ ನಡುವೆ ಶರೀರರಾಜ್ಯ ಪ್ರಾಪ್ತಿಗಾಗಿ ಹೋರಾಟ ನಡೆಯುತ್ತಿದೆ. ಅಂತರ್ಯದಲ್ಲಿ ಎಲ್ಲಿಲ್ಲದ ಒಳತೋಟಿ. ಇಂಥ ಸ್ಥಿತಿಯನ್ನು ಕವಿ ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾನೆ.

ರಾಧೆಯು ಕಾಲು ಮೊದಲು ಚಂಚಲವಾಗಿತ್ತು. ಅವಳು ಓಡಿಓಡಿಹೋಗುತ್ತಿದ್ದಳು. ಆದರೆ ಈಗ ಅವಳ ಕಾಲಿನ ಚಾಂಚಲ್ಯ ಕಣ್ಣಿಗೆ ಬಂದಿದೆ. ಮೊದಲು ಅವಳ ಮಾತಿನಲ್ಲಿ ಎಚ್ಚರವಿರಲಿಲ್ಲ. ಈಗ ಎಲ್ಲಿಲ್ಲದ ಎಚ್ಚರ! ಮೊದಲು ಮುಕ್ತ ಅಟ್ಟಹಾಸ, ಈಗ ಮುಗುಳುನಗೆ ಮಾತ್ರ. ಈಗ ಅವಳ ಕಣ್ಣು ತನ್ನ ಚೆಲುವಿನಮೇಲೆ. ಕನ್ನಡಿಯಲ್ಲಿ ಮುಖ ನೋಡಿಕೊಂಡದ್ದೂ ನೋಡಿಕೊಂಡದ್ದೇ. ಚಿತ್ತ ಚಂಚಲವಾಗಿ ಹೋಗಿದೆ. ಸಖಿಯರು ಪ್ರೇಮಕತೆಗಳನ್ನು ಹೇಳಿದಾಗ ಕುರಂಗಿ ಸಂಗೀತವನ್ನು ಆಲಿಸುವಂತೆ ಅವಳು ಕಿವಿಗೊಡುತ್ತಾಳೆ. ಸಂಕ್ಷೇಪದಲ್ಲಿ ವಯಃಸಂಧಿಯಲ್ಲಿ ನಿಂತ ಆಕೆಯ ವ್ಯಾಪಾರ ಹೀಗಿದೆ :–

" **ಚಣಚಣವು** ಆ ಬಾಲೆ ಚಂಚಲ ನಯನಾಂಚಲೆ,

ಚಣಚಣಕೆ, ಅವಳ ದೇಹಕೆ ವಸನಧೂಳಿಯು ಪಳಂಚಲೆ॥
ಚಣಚಣ ದಶನಕಾಂತಿ ಬೀರಿ ಚೆಲ್ಲುತಿಹಳು ನಗೆ ಮುಗುಳ।
ಮನಚಣವೆ ತುಟಿಮುಚ್ಚಿ ತಡೆವಳು ನಗೆ ಮುಗುಳ॥
ಚಣ ಟೆಚ್ಚಿ ನಡೆವಳು ಬೇಗ, ಚಣ ಚಲಸಮಂದ।
ಮದನ ಕಲಿಸುತಿಹನಾಕೆಗೆ ಪ್ರಥಮ ಪಾಠದನುಬಂಧ॥
ಎದೆ ಮುಗುಳತ್ತ ಕಣ್ಣ ಬೀರಿ, ಮೂಡುತಿಹಳು ತುಂಬ ಜತನವ।
ಚಣ ಸೆರಗ ನೋಸರಿಪಳು, ಚಣ ಮರೆವಳು ಹಸುಳೆತನವ॥
ಬಾಲೆಯು ತನುವಿನ ಮೇಲೆ ನಡೆದಿದೆ ಶೈಶವತಾರುಣ್ಯದ ಮೇಳ।
ಎರಡರಲಿ ಕಿರಿದಾವುದು ಹಿರಿದಾವುದು ಅರಿಯದದು, ಕೇಳ।
ವಿದ್ಯಾಪತಿಯೆಂದ, ಕೇಳು ಕೃಷ್ಣ ಕಮಲವದನ,
ಆರು ಬಲ್ಲರು ಶೈಶವ ಯೌವನದ ಹದನ?''

ವಯಃ ಸಂಧಿಯು ಸ್ಥಾನ ಸ್ವಭಾವ ಅಥವಾ ವ್ಯವಹಾರವಲ್ಲ, ದೇಹ. ಆದ್ದರಿಂದ ದೇಹ ಜನ್ಯ ವಿಕಾರಗಳನ್ನೇ ಕವಿ ಹೆಚ್ಚಾಗಿ ವರ್ಣಿಸಿದ್ದಾನೆ. ಯೌವನಾಗಮನವನ್ನು ಅವಳು ಅತ್ಯಂತ ಸೋಜಿಗದಿಂದ ನೋಡುತ್ತಿದ್ದಾಳೆ. ತನ್ನ ಹೊಸ ಪರಿಸ್ಥಿತಿ ಏನೆಂಬುದೇ ಅವಳಿಗೆ ಅರ್ಥವಾಗದು. ಈ ರೀತಿ 'ಅಜ್ಞಾತ ಯೌವನೆ' ಯಾದ ಆಕೆಯ ಮುಗ್ಧತೆಯನ್ನು ಕವಿ ಅತ್ಯಂತ ಸಹಜವಾಗಿ ಚಿತ್ರಿಸಿದ್ದಾನೆ:—

"ಶೈಶವ ತೊರೆಯಿತು ಶಶಿವದನೆಯ ತನುವ,
ತ್ರಿವಳಿಯು ಮಾರ್ಗದಲಿ ತೊಲಗಿಹುದು ನೋಡವಳ ಶಿಶುತನವ।
ಬಂದಿತೋ ಹರೆಯ, ಮಂದಗಮನದಲಿಬಂದಿಹುದು ಕುಡಿ ನೋಟ,
ಹೆಜ್ಜೆದೋರಿಹುದು ಲಜ್ಜೆ, ಬಿರುನಗೆ ಕಿತ್ತಿಹುದು ಓಟ!"

ಇಂಥ ಯುವತಿಯ ಸೌಂದರ್ಯವನ್ನು ಕವಿ ಹಾಡಿತಣಿ
ಯನು, ಹೊಗಳಿತಣಿಯನು.

ಚಂದಿರನ ಸಾರವ ತಂದು, ನಿಂದು ನಿರ್ಮಿಸಿದರಾಕೆಯುವದನಾರ
ವಿಂದವ |
ಸುಧೆಯಲಿ ತೊಳೆದರದನು, ಚಕಿತವಾಯಿತು ಚಕೋರ ಕಂಡು
ಕಣ್ಣ ಚಂದವ |
ಮುಸುಕನೋಸರಿಸೆ ಹಬ್ಬಿತು ದಶದಿಶೆಯಲಿ ಬೆಳಕಿನ ಬಣ
ಹುಣ್ಣಿಮೆಯ ಚಂದಿರನಿಗೆ ಬೆರಸಿ ಕಲಸಿ ಹೊನ್ನ
ಮುಖವ ನಿರ್ಮಿಸಿ ಚೆಲ್ಲೆ ಉಳಿದ ಮಣ್ಣ
ಮೂಡಿತದೋ ನೋಡು ಜಗಜಗಿಪ ತಾರಾಗಣ |*

ಇನ್ನು ಆಕೆಯ ಕಣ್ಣುಗಳನ್ನು ನೋಡಬೇಕು. ಅವು ಹೃದಯ ಕೋಷದ ಕಿಟಕಿಗಳಲ್ಲವೆ. ಕಣ್ಣು ರೂಪ ಸೌಂದರ್ಯದ ಸರ್ವೋತ್ತಮ ಪ್ರತೀಕ. ವಿದ್ಯಾಪತಿಯ ಕಲ್ಪನೆಯನ್ನು ನೋಡಬೇಕು :—

" ಮೂರಂಬಿನಿಂದ ಗೆದ್ದ ಮೂಲೋಕವ ಮದನ |
ಈರಂಬ ನಾಕೆಯ ಕಂಗಳಲಿಬ್ಬೈತಿಟ್ಟ, ಉಳಿವುದಿನ್ನೆಂತು ರಸಿಕಜನ" †

ಆಕೆಯ ಕೃಶಗಾತ್ರ, ಪೀನಪಯೋಧರ ಇವೆರಡರ ಮೇಳ ಎಂತಿದೆಯೋ ನೋಡಬೇಕು. ಪಯೋಧರ ಯುಗಳ ಕನಕ ಲತೆಯ ಮೇಲೆ ಮೇರುಪರ್ವತವನ್ನು ಹೇರಿದಂತಿದೆಯಂತೆ. ಈ ರೀತಿ ನಡೆದಿದೆ ರಾಧೆಯ ನಖಶಿಖವರ್ಣನೆ.

---

*ವಿದ್ಯಾಪತಿ ಕೀಪದಾವಲಿ—ಪದ ೧೪. †ಅದೇ ಪದ ೨೩.

ಪದ್ಯ : ಸ್ನಾತಾರಮಣಿಯ ಚೆಲುವನ್ನು ನೋಡಬೇಕು:–

"ರಮಣಿ ಮಾಡುತಿಹಳು ಸ್ನಾನ,
ಕಂಡು ಎದೆಗೆ ನಾಟುತಿಹುದು ಪಂಚಬಾಣ!
ಚಿಕುರ ನಿಕರದಿಂದಳಿವುದು ನೀರು ಧಾರಾಕಾರ |
ವದನ ಶಶಿಯು ಕಂಡು ರೋದಿಸುವಸು ಅಂಧಕಾರ |
ಕುಚದ ಜೋಡಿ ಚಕ್ರವಾಕ ಪಕ್ಷಿ ಏನು ಚೆಲುವು ಏನುಚಾರು!
ಹಾರಿ ಹೋದಡದನು ತಂದು ಕೊಡುವರಾರು?
ಬಂಧಿಸಿಡುವ ಕಷ್ಟ ಅದನು ಅವಳ ಬಾಹು ಪಾಶಕೆ,
ಇಲ್ಲದಿರಲು ಹಾರಿ ಹೋಗುವುದದು ಆಕಾಶಕೆ!
ಒದ್ದೆ ಬಟ್ಟೆ ಅಂಟಿಹುದವಳ ಮೃದು ಗಾತ್ರವ |
ಕಲಕಿರುವನು ಕಾಮ ಮುನಿಯ ಮನದ ಪಾತ್ರವ ||"

ರಾಧೆಯ ಈ ಸೌಂದರ್ಯ ಕೃಷ್ಣನಿಗೆ ಹುಚ್ಚು ಹಿಡಿಸಿ ಬಿಡುತ್ತದೆ. ಅವನ ವಿರಹ ಉನ್ಮಾದಾವಸ್ಥೆಯನ್ನು ಮುಟ್ಟುತ್ತದೆ. ಅವನು ಹುಚ್ಚನಂತೆ ಬೆಟ್ಟ, ನದಿ, ಗಿಡ, ಮರ, ಕೋಗಿಲೆ, ತುಂಬಿ ಜಿಂಕೆ, ಆನೆ, ಚಂದಿರ ಮತ್ತು ಬೆಳುದಿಂಗಳನ್ನು 'ನನ್ನ ರಾಧೆ,ಎಲ್ಲಿ ನನ್ನ ರಾಧೆ ಎಲ್ಲಿ,ಅವಳ ಹೆಸರಾದರೂ ಹೇಳಿ, ಎಂದು ಅಂಗಲಾಚಿ ಬೇಡುತ್ತಾನೆ :—

"ಗಿರಿ ನದಿತರುವರ ಕೋಕಿಲ ಭ್ರಮರವರ ಹರಿಣ ಕರಿ ಚಂದಿರ!
ಎಲ್ಲರು, ನಿರ್ದಯರಾದಿರೆ, ಬೇಡುವೆ ನಿಮ್ಮವ, ಪೇಳಿರೆ, ಅವಳ ಕಂಡಿರ ||"

## ವಿರಹದ ದುಸ್ತರ ಸಾಧನೆ

ಪ್ರೇಮ ಸಾಧನೆಯ ಒರೆಗಲ್ಲು ವಿರಹ, ಯೌವನದ

ಮಾದಕಗಂಧ, ಚೆಲುವಿನ ಚಂದ್ರಿಕೆ, ಉದ್ದಾಮಕಾಮದ ಉಬ್ಬರ,ಇವೆಲ್ಲವನ್ನೂ ಕೂಡಿಸುವ ಬಯಕೆ ಮಿಲನ ಶೃಂಗಾರದಲ್ಲಿ. ಆದರೆ ಈ ಸಂಯೋಗ ಶೃಂಗಾರ ಕವಿಯ ಉತ್ಕೃಷ್ಟ ಸಾಧನೆ ಯಲ್ಲ. ಉತ್ಕೃಷ್ಟ ಸಾಧನೆ ಮತ್ತು ದಿವ್ಯ ಸಿದ್ಧಿ ಇರುವುದು ವಿಯೋಗ ಶೃಂಗಾರದ ಚಿತ್ರಣದಲ್ಲಿ. ವಿರಹ ಕಾಮವನ್ನು ಪ್ರೇಮದ ಅಪರಂಜಿಯನ್ನಾಗಿ ಮಾಡುತ್ತದೆ. ವಿದ್ಯಾಪತಿಯ ವಿಪ್ರಲಂಭ ಶೃಂಗಾರ ಚೊಕ್ಕ ಬಂಗಾರ. ಈ ಗಹನ ಗಭೀರ ವಿಯೋಗ ಚಿತ್ರಣ ವಿದ್ಯಾಪತಿಯನ್ನು ಮಾಂಸಲ ಸೌಂದರ್ಯದ ನೆಲದಿಂದ ಮೇಲೆತ್ತಿ ಭಾವುಕತೆಯ ಹೈಮಾಚಲ ಜ್ಯೌತ್ಸ್ನ್ಯಕ್ಕೇರಿಸಿದೆ.

ವಿರಹಿಣಿ ರಾಧೆಯ ದಯನೀಯದಶೆಯ ವರ್ಣನೆಯಂತೂ ಅಸಂಭವ. ಕೃಷ್ಣ ಏನಾದರೂ ರಾಧೆಯಾದರೆ ಆತನಿಗೆ ವಿರಹ ವೇದನೆ ಅದೆಂಥ ಪ್ರಾಣಾಂತಕ ವೇದನೆ ಎಂಬುದರ ಅರಿವಾಗುತ್ತದೆ :—

‘ ಅದೇ ಯಮುನೆಯ ತಡಿಯಲಿ ಗಮನ |
ಗೋಪ ಗೋಪಿಯರೆಂತು ಮರೆವರವನ ?
ಪಂಜರದಲ್ಲಿ ಗೋಳಿಡುತಿಹುದು ಶುಕಕುಲ |
ಮಧುರೆಯತ್ತ ಧಾವಿಸುತಿಹುದು ಆಕುಲಪಶು ಸಂಕುಲ ||
ವಿಲವಿಲನೆ ನರಳಿ ತಳಮಳಿಪುದು ಹರಣ |
ಮರುಹುಟ್ಟಿನಲ್ಲಿ ಕಾಂಬೆ ಕೃಷ್ಣನ, ಬಾರ ಮರಣ ||
ಮಾಧವ, ತಳೆಯಲಿ ಜನ್ಮವ ರಾಧೆಂಬ, |
ಆಗಲರಿವನವನು ವಿರಹದ ದಾರುಣ ಬಾಧೆಯ ||’

ಮಧುಮಾಸ ಮಂದಹಾಸ ಬೀರಿತು. ಒಣನಿದ ಗಿಡ ಮರಗಳು ನಳನಳಿಸಿದವು. ಆದರೆ ಪ್ರವಾಸಿಯಾದ ನಲ್ಲ ಮಾತ್ರ ಬರಲಿಲ್ಲ. ವಿರಹಿಣಿ ರಾಧೆಯ ಕಣ್ಣುಗಳಿಗೆ ಮಾತ್ರ ವಸಂತ ವಸಂತವಲ್ಲ ಮಳೆಗಾಲ :

‘ ಎಲೆಯಿಲ್ಲದ ಗಿಡಮರಕೆ ನವನವ ಪತ್ರದ ಶೃಂಗಾರ ।
ವಿರಹಿಣಿಯು ಕಂಗಳಲಿ ನೆಲೆಸಿಹುದು ಮಳೆ ಮುಂಗಾರ ॥’

ಬದುಕೆಲ್ಲ ನಿರೀಕ್ಷೆಯಲ್ಲಿ ಕಳೆದರೆ ಸುಖಪಡುವುದು ಯಾವಾಗ ? ಯೌವನ ಇಳಿದು ಹೋದಮೇಲೆ ಏನಿದ್ದರೇನು ? ಹೊಳೆ ಇಳಿದು ಹೋದಮೇಲೆ ಉಳಿದುದೆಲ್ಲ ಕೆಸರು !

“ ಸರಸಿಜನಿಲ್ಲದ ಸರೋವರ, ಸರೋವರವಿಲ್ಲದ ಸರಸಿಜ,
ಎಲ್ಲಿಯು ಸರಸಿಜ, ಇಲ್ಲದಿರೆ ಭಾನು ?
ಯೌವನವಿಲ್ಲದ ಶರೀರ, ಶರೀರ ವಿಲ್ಲದ ಯೌವನ
ಎಲ್ಲಿಯು ಯೌವನ, ದೂರವಿರಲು ನಲ್ಲತಾನು ?
ಸಖಿ, ನನ್ನ ವಿಧಿ ತುಂಬ ವಿರೋಧಿ, ತಂಗಿ,
ಪಿರಿದು ಮದನವೇದನೆ, ನಲ್ಲ ವಚನಭಂಗಿ ॥
ಆರು ನೀಡುವರವಗೆ ಬೋಧಿ ?
ಎಲ್ಲೆಡೆ ಭ್ರಮರ ಭ್ರಮಿಪ, ಕುಸುಮ ಕುಸುಮದಲವಗೆ ರಮಣ!
ಮಂಜರಿಯಲಿಹುದು ಬರಿದೆ ಉದಕ
ಮಂದಪವನ ಚಲನ, ಪಿಕದ ಕುಹುಕುಹು ಕೂಜನ ।
ವಿರಹಿಣಿ ನೂಕುವುದೆಂತು ಬದುಕ ?
ನಮ್ಮ ನೇಹ ನಿರ್ಮಲ ಇಲ್ಲವದಕೆ ಮೇರೆ ।
ಹಿರಿಯರ ವಚನವಾಗದು ಹುಸಿ, ಅಮೃತ ನಿಧಿ।

ನಲ್ಲಗಾರು ನುಡಿವರು ಪೇಳೆ ನೀರೆ !
ಎಲ್ಲೆ ಮೀರಿಹುದು, ವಿರಹ ಪಯೋನಿಧಿ !*

ಪ್ರಿಯನಿದ್ದಾಗ ಯಾವ ವಸ್ತುಗಳು ಸಂತಸವನ್ನೀಯುತ್ತಿದ್ದವೋ ಅವೇ ಇಂದು ಅತಿಶಯವೇದನೆಯನ್ನುಂಟು ಮಾಡುತ್ತಿವೆ.

ಚಂದಷವಾಗಿದೆ ಗರಳ ಸಮಾನ |
ಮಲಯಪವನ ಬೆಂಕಿ ಕಾಣ ||
ಸುಧಾ ನಿಧಿಯು ಅಗಿಹನು ಚಂಡಕಿರಣ ||
ಇರುಳು ಕಳೆಯದು, ಸುದತಿಗಾಗಿಹುದು ಮರಣ ||

ವಸಂತ ಹೀಗಾದರೆ ಮಳೆಗಾಲ ಇನ್ನೂ ಭಯಂಕರ. ಕಾರ್ಮೋಡ ಆಗಸವನ್ನೆಲ್ಲ ಮುಚ್ಚಿದೆ. ಮಳೆ ಧಾರಾಕಾರವಾಗಿ ಸುರಿಯುತ್ತಿದೆ. ಗುಡುಗಿನ ಅಬ್ಬರ ಎದೆ ನಡುಗಿಸುವಂತಹುದು, ಮಿಂಚು ಕಣ್ಣು ಕುಕ್ಕುತ್ತಿದೆ.

ನೀರೆ, ನಮ್ಮ ದುಃಖಕಿಲ್ಲ ಪಾರ |
ಮುಸುಕಿಹುದು ಮೋಡ, ಮಾಸ ಭಾದ್ರಪದ ನೋಡ |
ಎನ್ನ ಮನೆ ಶೂನ್ಯ, ಮನ ಶೂನ್ಯ, ಶೂನ್ಯವಪಾರ ||೧||
ಮಿಂಚು, ಮೋಡ, ಗುಡುಗು, ಗರ್ಜನೆಯಂತು ಸಂತತ |
ಮಳೆ ಮುಳುಗಿಸಿಹುದು ಇಳೆಯ ||
ನಲ್ಲ ನಿಲ್ಲ ಊರಲಿ, ಕಾಮದಾರುಣ,
ಕರೆಯುತಿಹನು ಕೂರಂಬಿನ ಮಳೆಯ ||೨||

*ವಿದ್ಯಾಪತಿ ಕೀಸಹಾವಲಿ ೧೯೧

ಬಡಿಯುತಿಹುದು ನೂರಾರು ಸಿಡಿಲು |
ಜಾಗರವಾಡುತಿಹುದು ಮದಿಸಿ ಮದಿಸಿ ನವಿಲು ||
ಕೂಗುತಿಹವು ಕಪ್ಪೆ, ಮಳೆ ಹಕ್ಕಿಗಳ ಗಡಣ |
ಎದೆಯ ತಲ್ಲಣಕಿಲ್ಲ ತವಿಲು ||
ದಿಕ್ಕನೆಲ್ಲ ತುಂಬಿಹುದು ಕತ್ತಲು, ಇರುಳು ಘೋರ |
ಚಂಚಲ ಮಿಂಚು ನೇಯುತಿಹುದು ಸರವ ||
ವಿದ್ಯಾಪತಿಯೆಂದ ಕಳೆವುದೆಂತು,
ಕಾಂತ ಹರಿಯಿಲ್ಲದೆ ಕಳೆವುದೆಂತು ನಿಶಿವಾಸರವ ||೩|| *

ವಿರಹವೇದನೆ ಸಹನೆಯ ಮೇರೆ ಮೀರುತ್ತದೆ. ವಿರಹಿಣಿ ವಿಲವಿಲನೆ ಒದ್ದಾಡುತ್ತ ಒಮ್ಮೆ ದಾರಿಹೋಕರನ್ನು ಒಮ್ಮೆ ತುಂಬಿಯನ್ನು, ಮತ್ತೊಮ್ಮೆ ಸಖಿಯರನ್ನು ಕಾಡಿಬೇಡಿ ಅವರೊಡನೆ ಕೃಷ್ಣನಿಗೆ ತನ್ನ ಸಂದೇಶ ಕಳುಹಿಸುತ್ತಾಳೆ :—

" ಕರವ ಮುಗಿದು ಪೇಳಿರಮ್ಮ ನಾಥಗೆ ।
ನನ್ನ ಮಾತನೆರಡ ಪೇಳಿರಮ್ಮ ಆತಗೆ ॥
" ನನ್ನ ನಿನ್ನೆಂತು ಒರೆವೆ ಕೊರೆವೆ ದೊರೆಯೆ ?
ನಿನ್ನ ಆರಾಧನೆ ಎನ್ನ ಹರಿಬ ಲೋಕವರಿಯೆ ॥"

ವಿರಹಿಣಿ ರಾಧೆ ನಿರ್ದಯನಾದ ಕೃಷ್ಣನಲ್ಲಿ ಅಂಗಲಾಚಿ ಬೇಡಿಕೊಳ್ಳುತ್ತಾಳೆ—" ನನ್ನನ್ನು ಇನ್ನೆಷ್ಟು ಪರೀಕ್ಷಿಸುತ್ತೀಯೆ, ಇದು ಸಾಲದೆ ?" ಎಂದು. ಈ ಮಾತಿನಲ್ಲಿ ಅದೆಂಥ ಕಾತರತೆ ಅಡಗಿದೆ ! ಕೃಷ್ಣ ' ನಾಳೆ ' ಬರುತ್ತೇನೆ. ಎಂದು ಹೇಳಿ ಹೋದ.

---

*ಅದೇಪದ ೧೯೯

ಆ ನಾಳೆಗಳೆಷ್ಟೋ ಉರುಳಿಹೋಧವು. ಆದರೆ ಅವಳಿಗೆ ಮಾತ್ರ 'ನಾಳೆ'ಯಾಗಲೇ ಇಲ್ಲ :—

" ನಾಳೆ ಬರುವೆನೆಂದು ಪೇಳಿ ಪೋದನಲ್ಲ, ನೋಡೆ।
ನಾಳೆ ನಾಳೆ ಎಂದು ಬರೆದು ಬರೆದು ತುಂಬಿರುವುದು ಗೋಡೆ॥
ನಾಳೆ ಬೆಳಕು ಹರಿದು ಲೋಕದಲ್ಲಿ ಚೆಲ್ಲಿತು ನಗೆ।
ಪೇಳೆ ಗೆಳತಿ, ಪೇಳೆ, ನಾಳೆಯೆಂದು ಎಂದು ಎನಗೆ "

ಅಷ್ಟೇ ಅಲ್ಲ ' ನಾಳೆ ನಾಳೆ ' ಎಂದು ನೆಲದ ಮೇಲೆ ಬರೆದು ಬರೆದು ಉಗುರೆಲ್ಲ ಸವೆದು ಹೋಯಿತು. ಅವನ ಹಾದಿಯನ್ನು ನಿಟ್ಟಿಸಿ ನಿಟ್ಟಿಸಿ ಕಣ್ಣೆಲ್ಲ ಮರಗಟ್ಟಿತು. ಪ್ರಿಯ ಪ್ರಿಯ ಎಂದು ಜಪಿಸಿಜಪಿಸಿ ನಾಲಿಗೆಯೆಲ್ಲ ಹುಣ್ಣಾಯಿತು. ಇಷ್ಟಾದರೂ ಅವಳ ನಲ್ಲ ಮಾತ್ರ ಬರಲಿಲ್ಲ. ಎಲೆ ಗಿರಿಕೆಂದರೆ ಸಾಕು ಕಿವಿ ಅತ್ತ ಮಾಡುವಳು. ಕಾಗೆ ಭವಿಷ್ಯವಾದಿ. ಆದ್ದರಿಂದ ಅದನ್ನು ಕಂಡಾಗ ಅವಳಿಗೆ ಕೊಂಚ ಧೈರ್ಯ ಬರುತ್ತದೆ. ಅವಳು ಅದನ್ನು ಬೇಡಿಕೊಳ್ಳುತ್ತಾಳೆ.

" ಸಾರು ನೀನು ನಿನ್ನ ನುಡಿಯಲೆನ್ನ ನಲ್ಲನ ಬರವ, ವಾಯಸ।
ಚಿನ್ನದ ಬಟ್ಟಲ ತುಂಬ ತುಂಬಿಕೊಡುವೆ ನಿನಗೆ ಪಾಯಸ!"

ಪ್ರಿಯಮಿಲನಕಾತರತೆ ಇದಕ್ಕಿಂತ ಚೆನ್ನಾಗಿ ಬೇರೆಂತು ಮೂಡೀತು!

ಇಷ್ಟಾದರೂ ತನ್ನ ನಲ್ಲ ಬಾರದುದನ್ನು ಕಂಡು ಅವಳಿಗೆ ಅನ್ನಿಸುತ್ತದೆ " ನನ್ನ ನಲ್ಲನಿರುವ ನಾಡಿನಲ್ಲಿ ಹೂವು ಅರಳದು,

ತುಂಬಿಗಳು ಗುಂಜಾರವ ಮಾಡವು, ಕೋಕಿಲೆಯಂತೂ ಮೂಕ! ಎಲ್ಲ ಋತುಗಳೂ ಒಂದೇ ಸಮನೆ ಇರುವಂತೆ ತೋರುತ್ತದೆ. ಆದ್ದರಿಂದಲೋ ಏನೋ ಮದನ ಅಲ್ಲಿ ದುರ್ಬಲ. ಅವನು ಯಾರನ್ನೂ ಕಾಡನು. ಹೀಗಿರುವಾಗ ನಲ್ಲನಿಗೆ ತನ್ನ ನಲ್ಲೆಯು ನೆನಪಾದರೂ ಹೇಗಾದೀತು ? ”

“ ಆವ ನಾಡಿನಲಿ ಕೋಕಿಲಕಿಲ್ಲ ಕೂಜನ, ಮಧುಕರಕಿಲ್ಲ ಗುಂಜನ
ಕುಸುಮಿತವಿಲ್ಲ ವಲ್ಲಿಯು ಚೆಲುವ ಕಾನನ ॥
ಆರು ಋತು ಮಾಸಭೇದವನೇ ಕಾಣದು ನಯನ,
ಅಲ್ಲಿ ಸಹಜದೆ ಅಬಲ ಮದನ ॥”

ಇಷ್ಟಾದರೂ ಆಕೆಯ ಆಶೆ ಹಿಂಗದು. ಆಶೆ ಎಂದಿಗೂ ಮುಗಿಯದ ಹಗ್ಗ. ಅದರಲ್ಲಿ ಅದೆಂಥ ಸುಧೆಯಿದೆ! ಅವನು ಖಂಡಿತ ಬರುವ ಎಂದು ಅವಳಿಗೆ ಪೂರ್ಣ ನಂಬಿಕೆ. ಕೃಷ್ಣ ರಾಧೆಯ ದುಃಖದಿಂದ ಕರಗಿ ಗೋಕುಲಕ್ಕೆ ಬಂದೇ ಬರುವ ರಾಧೆ ಅವನ ಚರಣಗಳಿಗೆ ಗೋಜಿಕೊಂಡು ಬಿಡುತ್ತಾಳೆ. ಆತನ ಚರಣಾರವಿಂದಗಳನ್ನು ತನ್ನ ನಖಚಂದ್ರಗಳಿಂದಪೂಜಿಸುತ್ತಾಳೆ. ಅನಂತರ ಕುಸುಮಶಯ್ಯೆಯಮೇಲೆ ಸುಖ ವಿಲಾಸ !

“ ಹರಿಯು ಬಂದ ಚಣವೆ ಗೋಜಿಕೊಳುವೆ ಚರಣಕೆ ।
ಉಗುರ ಚಂದ್ರನಿಂದ ಪೂಜೆ ಗೊಳಲವನ ಪದಾರವಿಂದ ॥
ಕುಸುಮಶಯ್ಯೆಯ ಹಾಸಿ ರತಿಕೇಳಿಯಲಿ ಮುಕ್ತಿ ಹರಣಕೆ ।
ಮನವು ಮನವ ಕೂಡಿ ಪಡೆಯಲಿ ಆನಂದ ।

ಕೊನೆಗೆ ಕನಸಿನಲ್ಲಿ ಪ್ರಿಯದರ್ಶನವಾಗುತ್ತದೆ. ಸ್ವಪ್ನ

ದರ್ಶನದಿಂದ ವಿರಹಿಣಿ ರೋಮಾಂಚಗೊಳ್ಳುತ್ತಾಳೆ. ಆಕೆಗೆ ಸಂಗ ಸುಖ ದೊರೆಯುತ್ತದೆ. ಆದರೆ ವಿಧಿವಿಲಾಸ! ಇರುಳು ಕಳೆಯಿತು, ಕನಸು ಒಡೆಯಿತು! ಮನ ಕಂಡುದನ್ನು ಕಣ್ಣು ಕಾಣದೇ ಹೋಯಿತು!

ರಾಧೆಯ ಪ್ರತೀಕ್ಷೆ ಪ್ರತೀಕ್ಷೆಯಾಗಿಯೇ ಉಳಿಯುತ್ತದೋ ಏನೋ! ಕ್ಷಣಗಳು, ದಿನಗಳು ಉರುಳಿದವು, ತಿಂಗಳು ಉರುಳಿದವು, ಕೊನೆಗೆ ವರ್ಷಗಳೂ ಉರುಳಿದವು. ನವಯುವತಿ ರಾಧೆ ಏನೆಂದು ಧೈರ್ಯ ತಳೆದಾಳು? ಅವಳ ಹೃದಯ ಕಾನನದಲ್ಲಿ ಬೆಳೆದ ಪ್ರೇಮಾಂಕುರ ವಿರಹದುರಿಯಿಂದ ಉರಿದುಹೋಗುತ್ತದೆ. ಶ್ಯಾಮ ಮೇಘ ಮಾತ್ರ ಸ್ನೇಹ ಸುಧೆಯ ಮಳೆ ಗರೆಯಲಿಲ್ಲ. ಯೌವನ ಇಳಿದು ಹೋದಮೇಲೆ ನಲ್ಲ ಬಂದು ತಾನೆ ಏನು ಪ್ರಯೋಜನ? ಪ್ರಕೃತಿಯ ಚರಾಚರಗಳೆಲ್ಲ ಇಂದು ಅವಳನ್ನು ಗೋಳುಗುಟ್ಟಿಸುತ್ತಿವೆ. ಆದರೂ ಅವಳ ನಲ್ಲ ಬರಲಿಲ್ಲ. ಕೊನೆಗೆ ಅವಳ ವಿರಹ ಉನ್ಮಾದಾವಸ್ಥೆಯನ್ನು ಮುಟ್ಟುತ್ತದೆ. ಆ ಉನ್ಮಾದದಲ್ಲೂ ಕವಿ ಪ್ರೇಮದ ಅದ್ವೈತವನ್ನು ಚಿತ್ರಿಸಿದ್ದಾನೆ. ಇದಕ್ಕಿಂತ ಮಿಗಿಲಾದ ವಿರಹದ ದಾರುಣತೆಯ ಚಿತ್ರ ವಿಶ್ವ ಸಾಹಿತ್ಯದಲ್ಲೇ ವಿರಳ.

"ಮಾಧವ ಮಾಧವ ಎನ್ನುತ ಕಾಮಿನಿ ಜಪಿಸಳು ಕ್ಷಣ ಕ್ಷಣ।
ಮಾಧವ ಮಾಧವ ಎನ್ನುತ ಮಾಧವನೆ ಆದಳು ಸುಂದರಿ ತಾನೆ
ತನ್ನ ಸ್ವಭಾವವನೆ ಮರೆತಿಹಳು ತಾನು, ಹೋಗಿಹುದು ತನ್ನತನ
ತನ್ನ ಗುಣಕೆ ತಾನೆ ಮಾರು ಹೋಗಿರುವಳು ಜಾಣೆ॥೧॥

ಮಾಧವ! ವಿಚಿತ್ರ ನಿನ್ನಯ ಸ್ನೇಹ
ತನ್ನ ವಿರಹದಲ್ಲೆ ಅವಳ ತನು ಜರ್ಜರ
ತಾನು ಬದುಕುವುದೆ ಅವಳಿಗೆ ಸಂದೇಹ ೨

ಬೆಳಗಿನೊಳೆದ್ದು ಸಖಿಯರ ಕಾತರದಿ ಕಂಡು,
ಮಿಡಿವಳು ಬಳ ಬಳನೆ ಲೋಚನ ಜಲ|
ಅನುಕ್ಷಣ ರಾಧೆ ರಾಧೆ ಎಂದು ಕನವರಿಸಿ ಕನವರಿಸಿ
ನುಡಿವಳು ಅರೆಬರೆ ಮಾತ ಮಾತೆಲ್ಲ ಕಳವಳ ||೩
ರಾಧೆಯಾಗಿ ಕನವರಿಸಿ ಕನವರಿಸಿ ಆಗಿಹಳು ಮಾಧವ,
ಮಾಧವನೆ ಆಗಿ 'ರಾಧೆ ರಾಧೆ' ಎಂದು ಎಂದು ಆಗಿಹಳು ರಾಧೆ
ಅಂತಾದರು ತೀರದು ಇಂತಾದರು ತೀರದು ದಾರುಣ ಪ್ರೇಮ
ಕ್ಷಣ ಕ್ಷಣವು ವಿಷಮಿಸುತಿಹುದು ವಿರಹ ಬಾಧೆ ||೪||
ಎರಡು ಕಡೆಯಲೂ ಉರಿತಗಲಿ ಉರಿಯುತಿಹುದು ಕೊರಡು*
ತಳಮಳಿಸುತಿಹುದು ನಡುವೆ ನಿಂತ ಕೀಟದ ಪ್ರಾಣ
ಎಂತಾದರು ವಲ್ಲಭನ ಕಾಣು ಸುಧಾಮುಖಿ, ಗೆಲ್ಲಲಿ ಹುಡುಡು
ಇಂತೆಂದನಾ ವಿದ್ಯಾಪತಿ ಕವಿ ಜಾಣ ||೫||

ರಾಧೆ ವಿರಹೋನ್ಮತ್ತಳಾಗಿ 'ಮಾಧವ' 'ಮಾಧವ' ಎಂದು ಜಪಿಸತೊಡಗುತ್ತಾಳೆ. 'ಮಾಧವ' 'ಮಾಧವ' ಎಂದು ಜಪಿಸುತ್ತ (ಭೃಂಗ ಕೀಟನ್ಯಾಯದಂತೆ) ಕೊನೆಗೆ ಅವಳೇ ಮಾಧವನಾಗಿ ಬಿಡುತ್ತಾಳೆ. ಕೃಷ್ಣನಾಗಿ ರಾಧೆಯ ಪ್ರೇಮದಲ್ಲಿ ತಲ್ಲೀನಳಾಗಿ ಹೋಗಿ ಬಿಡುತ್ತಾಳೆ. ಆಗ ರಾಧೆಯ ವಿರಹದಲ್ಲಿ ಉನ್ಮತ್ತಳಾಗಿ 'ರಾಧೆ' 'ರಾಧೆ' ಎಂದು ಕನವರಿಸತೊಡಗುತ್ತಾಳೆ. ಬೆಳಗಾದ ಕೂಡಲೆ ಕಂಬನಿ ಮಿಡಿಯುತ್ತ ಕಾತರಳಾಗಿ

*ವಿದ್ಯಾಪತಿ ಕೀಪದಾವಳಿ ಪದ ೨೧

ಸಖಿಯತ್ತ ನಿಟ್ಟುಸಿರುತ್ತಾಳೆ. 'ರಾಧೆ, ರಾಧೆ' ಎಂದು ಎಂದು ಕೊನೆಗೆ ಮತ್ತೆ ರಾಧೆಯಾಗುತ್ತಾಳೆ. ಮತ್ತೆ 'ಮಾಧವ, ಮಾಧವ' ಎಂಬ ಜಪ ಮೊದಲಾಗುತ್ತದೆ. ಹೀಗಾಗಿ ಮತ್ತೆ ಮಾಧವನಾಗುತ್ತಾಳೆ. ಎರಡು ತುದಿಗಳಲ್ಲೂ ಉರಿಯುತ್ತಿರುವ ಮರದ ತುಂಡಿನ ನಡುವೆ ಸೇರಿಕೊಂಡ ಕೀಟದಂತೆ ಅಕೆ ಈ ಎರಡೂ ಉರಿಗಳ ನಡುವೆ ಸಿಲುಕಿಕೊಂಡು ವಿಲವಿಲನೆ ಒದ್ದಾಡುತಿದ್ದಾಳೆ. ವಿರಹದ ದಳ್ಳುರಿಯಲ್ಲಿ ಆಕೆ ಈ ರೀತಿ ಬೇಯುತ್ತಿದ್ದಾಳೆ. ಪ್ರಾಣ ವ್ಯಾಕುಲವಾಗಿದೆ.

ವಿದ್ಯಾಪತಿಯ ಕಾವ್ಯ ಕಾನನದಲ್ಲಿ ಇಂಥ ಕಮನೀಯ ಕುಸುಮಗಳು ನೂರಾರಿವೆ. ಪರಕೀಯ ಪ್ರೇಮದ ಚಿತ್ರಗಳೂ ಅನೇಕವಿವೆ. ಇವುಗಳಲ್ಲೆಲ್ಲ ವಿದ್ಯಾಪತಿಯ ಸೂಕ್ಷ್ಮ ಸಂವೇದನ ಶೀಲತೆ, ಸೌಂದರ್ಯದೃಷ್ಟಿ, ಭಾವತೀವ್ರತೆ ಅಪ್ರತಿಮವಾಗಿ ಬಿಂಬಿತವಾಗಿವೆ.

ಇಷ್ಟಾದರೂ ರಾಧೆ ನಿಷ್ಕ್ರಿಯಳಲ್ಲ. ಆಕೆ ಪ್ರೇಮ ಮಾರ್ಗದ ಸಾಹಸಿಯಾದ ಪಾಂಥೆ. ಪ್ರೇಮದ ಹೆಸರಿನಲ್ಲಿ ಮನೆಯಲ್ಲಿ ಕುಳಿತು ಅಸಹಾಯಕಳಾಗಿ ನಿಟ್ಟುಸಿರು ಬಿಡುವ ಹೆಣ್ಣು ಆಕೆಯಲ್ಲ. ಭಯಂಕರವಾದ ಮಳೆಗಾಲದ ಕಾಳರಾತ್ರಿಯಲ್ಲಿ ನೆರೆಬಂದ ನದಿಯನ್ನೂ ಲಕ್ಷಿಸದೆ ದಾರಿಯಲ್ಲಿ ವಿಷಕಾರುವ ಸರ್ಪಗಳನ್ನು ಗಮನಿಸದೆ ಆಕೆ ಅಭಿಸಾರಕ್ಕೆ ಹೊರಡುತ್ತಾಳೆ. ಕುಂಜ ಭವನದಲ್ಲಿ ವಾಸಕಸಜ್ಜೆಯಾಗಿ ಕೃಷ್ಣನ ಬರವಿಗಾಗಿ ಕಾಯುತ್ತ, ತಾರೆಗಳನ್ನು ಎಣಿಸುತ್ತ ಆಕೆ ರಾತ್ರಿಕಳೆಯುತ್ತಾಳೆ.

ಹಾಸಿನ ಮೇಲೆ ಹೂವು ಚೆಲ್ಲಿದೆ. ಪರಿಮಳ, ಅಗರು, ಚಂದನದ ಗಂಧದಿಂದ ಇಡೀ ವಾತಾವರಣ ಮಾದಕವಾಗಿದೆ. ರಾಧೆ ಮದನ ತಾಡಿತಳಾಗಿ ಎಲ್ಲಿಡೆಯೂ ಕೃಷ್ಣನ ಚರಣ ಚಾಪನ್ನು ಕೇಳಲು ಕಿವಿಕೊಡುತ್ತಾಳೆ. ಅವಳ ಕಣ್ಣು ಬಾಗಿಲ ಮೇಲೇ ನಟ್ಟಿದೆ. ಅಗೋ ಕೃಷ್ಣ, ಬಂದ! ಬಂದ! ಎಂಬ ಅದೆಂಥ ಆಕುಲ ಪ್ರತೀಕ್ಷೆ! ಈ ರೀತಿ ರಾಧೆ ತನ್ನ ಕಠೋರ ಸಾಧನೆ, ಆತ್ಮ ಸಮರ್ಪಣೆ, ಅದ್ಭುತರೂಪ, ವಿನಯಕಾತರತೆ ಹಾಗೂ ತನು ಮನದ ಅತುಲ ಆರಾಧನೆಯಿಂದ ಕೃಷ್ಣನನ್ನು ಪಡೆಯುತ್ತಾಳೆ. ಈ ರೀತಿ ವಿದ್ಯಾಪತಿಯ ರಾಧೆ ಕಾಳಿದಾಸನ ಪಾರ್ವತಿಯಂತೆ ಕಾಂಚನ ಪದ್ಮಧರ್ಮಿ.

ಇತರ ಕವಿಗಳು, ಸಾಧಕರು, ಮತ್ತು ಧರ್ಮ ಸಂಸ್ಥಾಪಕರು ತಮ್ಮ ಲೇಖನಿಯಿಂದ ರಾಧೆಯನ್ನು ಕೃಷ್ಣನಿಗೆ ಪೂರಕವಾಗಿ ಚಿತ್ರಿಸಿದ್ದಾರೆ. ಅವಳಲ್ಲಿ ದೈವೀಗುಣಗಳನ್ನು ಸಮಾವೇಶಗೊಳಿಸಿದ್ದಾರೆ. ಆದರೆ ವಿದ್ಯಾಪತಿಯ ರಾಧೆ ತನ್ನ ಮಾನವ ದುರ್ಲಭ ಸಾಧನೆಯಿಂದ ಕೃಷ್ಣನಿಗೆ ಪೂರಕಳಲ್ಲ, ಕೃಷ್ಣನೇ ಆಗಿಬಿಡುತ್ತಾಳೆ. ಅವಳು ಮಾನವಿಯಾಗಿಯೇ ಗೋಕುಲದಲ್ಲಿ ಜನ್ಮ ತಳೆಯುತ್ತಾಳೆ; ಅವತಾರವಾಗಿ ಸ್ವರ್ಗದಿಂದ ಧರೆಗೆ ಇಳಿದು ಬರುವುದಿಲ್ಲ. ಬುವಿಯಿಂದಲೇ 'ಉದ್ಧಾರ'ವಾಗಿ ಸ್ವರ್ಗದತ್ತ ಆರೋಹಣ ಮಾಡುತ್ತಾಳೆ. ಈ ಸ್ವರ್ಗಾರೋಹಣದಲ್ಲಿ ಆಕೆ ಒಂದು ದಿವ್ಯವಾದ ಪ್ರಭೆಯ ಮೇಲ್ಕಟ್ಟನ್ನು ನಿರ್ಮಿಸುತ್ತಾಳೆ. ಅದರ ಅಡಿಯಲ್ಲಿ ರಾಧೆ ತಾನೂ ಜಗ ಜಗಿಸುತ್ತಾಳೆ. ಕೃಷ್ಣನೂ ಅದರಡಿಯಲ್ಲಿ ಬೆಳಗುತ್ತಾನೆ. ಇಂಥ

ಅಪೂರ್ವ ಪಾತ್ರ ಚಿತ್ರಣದಿಂದ ಕವಿಯೂ ಬೆಳಗುತ್ತಾನೆ.

ವಿದ್ಯಾಪತಿಯ ಕೃಷ್ಣ ಭಕ್ತಿಗಿಂತ ಶೃಂಗಾರದ ಆಲಂಬನ. ಹಿಂದೀ ಸಾಹಿತ್ಯದಲ್ಲಿ ರಾಧಾಕೃಷ್ಣರನ್ನು ಶೃಂಗಾರದ ಆಲಂಬನ ವನ್ನಾಗಿ ಚಿತ್ರಿಸಿದವರಲ್ಲಿ ವಿದ್ಯಾಪತಿಯೇ ಮೊದಲಿಗನು. ರಾಧಾ ಕೃಷ್ಣರ ಈ ಸ್ವರೂಪ ಮೊತ್ತ ಮೊದಲು ಕಾಣುವುದು ಹಾಲನ 'ಗಾಥಾ ಸಪ್ತಶತಿ'ಯಲ್ಲಿ. ಕ್ರಮೇಣ ಇದು ಲೋಕ ಗೀತಗಳಲ್ಲಿ ವಿಕಾಸಗೊಂಡು ಭಕ್ತಿ ಆಂದೋಳನದಿಂದ ಸ್ಫುರಣಗೊಂಡು ಭಾರತೀಯ ಜನಮನದಲ್ಲಿ ಬೇರೂರಿತು. ಭಾಗವತದಲ್ಲಿ ಕೃಷ್ಣನ ಯೌವನದ, ವಿಲಾಸ ವೈಭವಗಳ ವಿಶದ ಚಿತ್ರಣವಿದೆ. ಬ್ರಹ್ಮ ವೈವರ್ತ ಪುರಾಣದಲ್ಲಿ ಕೃಷ್ಣಲೀಲೆಗೆ ಪೂರಕವಾಗಿ ರಾಧೆ ಬಂದಳು. ಆದರೆ ಬ್ರಹ್ಮವೈವರ್ತ ಹದಿನೈದು ಹದಿನಾರನೆಯ ಶತಮಾನದ ಕೃತಿಯೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿ ದ್ದಾರೆ. ಆದ್ದರಿಂದ ಅದು ಜಯದೇವ ಮತ್ತು ವಿದ್ಯಾಪತಿಗೆ ಋಣಿ ಎನ್ನಬಹುದೆಂದು ಕಾಣುತ್ತದೆ. ವಿದ್ಯಾಪತಿ ತನ್ನ ರಾಧಾ ಕೃಷ್ಣರ ಈ ರೂಪಕ್ಕೆ ಪ್ರೇರಣೆಯನ್ನು ಜಯದೇವನಿಂದ ಪಡೆದ. ಅಷ್ಟೇ ಅಲ್ಲ ಅವನಿಂದಲೂ ಒಂದು ಹೆಜ್ಜೆ ಮುಂದೆ ಹೋಗಿ ರಾಧಾಕೃಷ್ಣರ ಚಿತ್ರವನ್ನು ಅತ್ಯಂತ ಸರಸವಾಗಿ, ನೈಜವಾಗಿ, ಮನೋವೈಜ್ಞಾನಿಕವಾಗಿ ಚಿತ್ರಿಸಿದ.

ವಿದ್ಯಾಪತಿ ಮೈಥಿಲಿಯಲ್ಲಿ ಗೇಯಪದಗಳನ್ನು ಬರೆದರೆ 'ಅವಹಟ್ಟ' (ಅಪಭ್ರಂಶದ ವಿಕಸಿತರೂಪ) ಭಾಷೆಯಲ್ಲಿ ಪ್ರೌಢ ಕಾವ್ಯಗಳನ್ನು ರಚಿಸಿದ್ದಾನೆ. ಹನ್ನೆರಡನೆಯ ಶತಮಾನದಿಂದ

ಈಚಿನ ಅಪಭ್ರಂಶವನ್ನು ವಿದ್ಯಾಪತಿ ಅವಹಟ್ಟ (ಅಪಭ್ರಷ್ಟ) ಎಂದು ಕರೆದಿದ್ದಾನೆ. ದೇಶಿಯ ಮೇಲೆ ಕವಿಗೆ ತುಂಬ ಮೋಹ. ಅವನು ಅದನ್ನು ಎಷ್ಟು ಹೊಗಳಿದರೂ ಸಾಲದು. 'ಕೀರ್ತಿಲತಾ' ಮತ್ತು 'ಕೀರ್ತಿಪತಾಕಾ' ಎಂಬ ಎರಡು ಗ್ರಂಥಗಳನ್ನು ಆತ ಇದೇ ಭಾಷೆಯಲ್ಲಿ ಬರೆದಿದ್ದಾನೆ. 'ಕೀರ್ತಿಲತಾ'ದಲ್ಲಿ ಆತ ತನ್ನ ದೇಶೀ ಪ್ರೇಮವನ್ನು ಹೀಗೆ ಹೇಳಿಕೊಂಡಿದ್ದಾನೆ:–

" ದೇಸಿಲ ವಅನಾ ಸಬ್ ಜನ ಮಿಟ್ಠಾ,
ತಂ ತೈಸನ ಜಂಪಇಗೋ ಅವಹಟ್ಠಾ " ॥

" ದೇಸಿಯ ಮಾತು ಎಲ್ಲ ಜನರಿಗೂ ಮಧುರ. ಆದ್ದರಿಂದ ಅವರಿಗಾಗಿ ಅವಹಟ್ಟದಲ್ಲಿ ಬರೆಯುತ್ತೇನೆ. "

' ಕೀರ್ತಿಲತಾ 'ದ ಭಾಷೆಯನ್ನು ನೋಡಿದರೆ ಅದನ್ನು ಗೀತಕಾರ ವಿದ್ಯಾಪತಿಯೇ ಬರೆದನೆಂದು ನಂಬುವುದು ಕಷ್ಟವಾಗುತ್ತದೆ. ಆದರೆ ವಿದ್ಯಾಪತಿ ಮೈಥಿಲೀ ಭಾಷೆಯ ಮಾಮರವನ್ನೇರಿ ಕುಕಿಲ್ವರಿದಂತೆ ಅವಹಟ್ಟದ ಕಠೋರ ಶಬ್ದಗಳ ನಡುವೆ ಗುಡುಗಲೂ ಬಲ್ಲ. ವಿದ್ಯಾಪತಿಯ ಭಾವುಕ ಕವಿ ಇಲ್ಲಿ ಬದುಕಿನ ಕಠೋರ ವಾಸ್ತವಿಕತೆಯ ನೆಲದ ಮೇಲೆ ಓಡಾಡಿದ್ದಾನೆ.

' ಕೀರ್ತಿಲತಾ ' ಒಂದು ಐತಿಹಾಸಿಕಕಾವ್ಯ. ತನ್ನ ಆಶ್ರಯದಾತನಾದ ಕೀರ್ತಿಸಿಂಹನ ಯಶೋಗಾನ ಮಾಡಲು ಕವಿ ಈ ಕಾವ್ಯ ಬರೆದಿದ್ದಾನೆ. ಅವನು ತನ್ನ ಕಾವ್ಯೋದ್ದೇಶವನ್ನು ಹೀಗೆ ಹೇಳಿದ್ದಾನೆ :—

ತಿಹು ಅನ ಖೇತ್ತಹಿ ಕಾಇ ತಸು ಕಿತ್ತಿವಲ್ಲಿ ಪಸರೇಇ ।
ಅಕ್ಬರ ಖಂಭಾರಂಭ ಇತೋ ಮಂಚೋ ಮಂಧಿನ ದೇಇ॥ *

" ಅಕ್ಷರವೆಂಬ ಕಂಭವನ್ನು ನೆಟ್ಟು ಅಟ್ಟಣೆಯನ್ನು ಕಟ್ಟ
ದಿದ್ದರೆ ತ್ರಿಭುವನಕ್ಷೇತ್ರದಲ್ಲಿ ಆತನ (ಕೀರ್ತಿಸಿಂಹನ
ಕೀರ್ತಿಯ ಬಳ್ಳಿ ಹೇಗೆ ಹಬ್ಬೀತು ? "

ಇದೊಂದು ಚಂಪೂ ಕಾವ್ಯ. ಕಥೆ ಭೃಂಗ ಭೃಂಗಿಯ
ಸಂವಾದ ಶೈಲಿಯಲ್ಲಿ ಸಾಗುತ್ತದೆ. ಭೃಂಗಿ ಪ್ರಶ್ನಿಸುತ್ತದೆ
ಭೃಂಗ ಉತ್ತರ ನೀಡುತ್ತದೆ. ಈ ರೀತಿ ಕಥಾನಕ ಅತ್ಯಂ
ಸರಸವಾದ ಸಂವಾದ ಶೈಲಿಯಲ್ಲಿ ನಡೆಯುತ್ತದೆ. ಕಾವ್ಯಾರಂ
ದಲ್ಲಿ ಭೃಂಗಿ ಪ್ರಶ್ನಿಸುತ್ತದೆ :—

ಭೃಂಗೀ ಪುಚ್ಛಇ ಭಿಂಗ ಸುನ ಕೀ ಸಂಸಾರಹಿ ಸಾರ ।
ಮಾನಿನಿ ಜೀವನ ಮಾನ ಸಇತೋ ವೀರಪುರುಸ ಅವತಾರ ॥

" ಎಲೆ ಭೃಂಗ, ಜಗತ್ತಿನಲ್ಲಿ ಸಾರವಸ್ತು ಯಾವುದು
ಹೇಳು " " ಮಾನಿನಿ ! ಮಾನಸಹಿತವಾಗಿ ಬಾಳುವುದು
ಹಾಗೂ ವೀರಪುರುಷನಾಗಿರುವುದು. "

ಹಾಗಾದರೆ ಯಾರನ್ನು ವೀರಪುರುಷ ಎಂದು ಕರೆಯ
ಬಹುದು ಎಂದು ಭೃಂಗಿ ಕೇಳುತ್ತದೆ. ಅದಕ್ಕೆ ಕವಿಯ ಉತ್ತರ:

---

* ಕೀರ್ತಿಲತಾ (ಸಂ. ಬಾಬೂರಾಮ ಸಕ್ಸೇನಾ—ಪ್ರಥಮ
ಪಲ್ಲವ ದೋಹೆ

"ಕೀರ್ತಿಲಬ್ಧನೂ ಸಂಗ್ರಾಮಶೂರನೂ, ಧರ್ಮಪರಾಯಣನೂ, ವಿಪತ್ತಿನಲ್ಲೂ ಆರ್ತನಾಗಿ ಅಂಗಲಾಚದವನೇ ವೀರ. ಅವನ ಸಂಪತ್ತನ್ನು ಸಜ್ಜನರು ಅನಾಯಾಸವಾಗಿ ಆನಂದ ಪೂರ್ವಕವಾಗಿ ಭೋಗಿಸುತ್ತಾರೆ. ಈತ ಗುಪ್ತದಾನಿ. ದಾನ ಕೊಟ್ಟು ಅದನು ಮರೆತೂ ನೆನೆಯದವನು. ಈತನ ಶರೀರ ದೃಢವಾದುದು. ಈ ಎಲ್ಲ ಲಕ್ಷಣಗಳಿಂದ ಕೂಡಿದ ಪುರುಷನೇ ವೀರ. ಅವನನ್ನೇ ಕುರಿತು ಗಾನ ಮಾಡುತ್ತೇನೆ."

ಆದರೆ ವಿದ್ಯಾಪತಿಯ ಪ್ರಕಾರ ಬರಿಯ ಹುಟ್ಟಿನಿಂದಲೇ ಯಾರೂ ವೀರಲಾಗಲಾರರು.

"ಪುರಿಸತ್ತೇಣ ಪುರಿಸಓ ನಹಿ ಪುರಿಸಓ ಜಮ್ಮ ಮತ್ತೇನ।
ಜಲದಾಣೇನಹು ಜಲಓ ನಹು ಜಲ ಓಪುಞ್ಜಓ ಧೂಮೋ"

"ಯಾರಲ್ಲಿ ಪೌರುಷವಿದೆಯೋ ಅವನೇ ವೀರ. ಹುಟ್ಟಿನಿಂದಲೇ ಯಾರೂ 'ಪುರುಷ'ರಾಗಲಾರರು. ಮೋಡ ಜಲದಾನ ಮಾಡಿದಾಗ ಮಾತ್ರ 'ಜಲದ'ವೆನ್ನಿಸಿಕೊಳ್ಳುವುದು. ಹೊಗೆಯ ರಾಶಿಯನ್ನು ಮೋಡವೆನ್ನಬಹುದೆ?"

ಇಷ್ಟೇ ಅಲ್ಲ ವಿದ್ಯಾಪತಿಯ ಪ್ರಕಾರ ಮಾನವಿಲ್ಲದ, ಧನೋಪಾರ್ಜನಶಕ್ತಿಯಿಲ್ಲದ ಪುರುಷ ಪುರುಷನೇ ಅಲ್ಲ, ಪುರುಷವೇಷದ ಪಶು. ಅವನಿಗೂ ಪಶುವಿಗೂ ಅಂತರವೆಂದರೆ ಪಶುವಿಗೆ ಬಾಲವಿದೆ ಇವನಿಗೆ ಬಾಲವಿಲ್ಲ ಅಷ್ಟೆ.

" ಸೋ ಪುರಿಸಓ ಜಸು ಮಾನೋ ಸೋ ಪುರಿಸಓ ಜಸ್ಸ
ಅಜ್ಜನೇ ಸಕ್ತಿ
ಇಅರೋ ಪುರಿಸಾ ಆರೋ ಪುಚ್ಛವಿಹೂನಾ ಪಸೂ ಹೋಇ॥

ಇದು ವಿದ್ಯಾಪತಿಯ ಪುರುಷಸೂಕ್ತ ! ಈ ರೀತಿ ಕ
ರತಿಸೂಕ್ತವನ್ನೇ ಅಲ್ಲ ಪುರುಷಸೂಕ್ತವನ್ನೂ ಹೇಳ ಬಲ್ಲ !

ವಿದ್ಯಾಪತಿಯ ಆದರ್ಶಕ್ಕೆ ತಕ್ಕ ಪುರುಷನೂ ದೊರೆ
ಅವನೇ ಕೀರ್ತಿಸಿಂಹ. ಕಥಾಕಾವ್ಯಗಳಲ್ಲಿ ಸಾಮಾನ್ಯವಾ
ರಾಜ್ಯಲಾಭ, ಕನ್ಯಾಹರಣ, ಗಾಂಧರ್ವ ವಿವಾಹ ಮೊದಲಾದ
ಪ್ರಧಾನ. ಆದರೆ ಇಲ್ಲಿ ಬರಿಯ 'ರಾಜ್ಯಲಾಭ'ದ ವರ್ಣ
ಇದೆ.

ಕ್ರಿ. ಶ. ೧೩೩೧ರಲ್ಲಿ ಮಲ್ಲಿಕ್ ಅಸ್ಲಾಂ ಎಂಬವ
ತಿರುಹುತ್ತಿನ ರಾಜ ಗಣೇಶ್ವರನನ್ನು ಮೋಸದಿಂದ ಕೊಂ
ಅವನ ರಾಜ್ಯವನ್ನು ಅಪಹರಿಸಿದ. ರಾಜನ ಕೊಲೆಯಿಂದ ರಾ
ದಲ್ಲಿ ಅ ರಾಜಕತೆ ಹಬ್ಬಿತು. ಇದನ್ನು ಕವಿ ತುಂಬ ನೈಜವಾ
ಚಿತ್ರಿಸಿದ್ದಾನೆ. ರಾಜನ ವಧೆಯಿಂದ ಪಶ್ಚಾತ್ತಾಪಗೊಂಡ ಅಸ್ಲಾ
ಗಣೇಶ್ವರನ ರಾಜ್ಯವನ್ನು ಅವನ ಮಗ ಕೀರ್ತಿಸಿಂಹನಿಗೆ ಕೊ
ಬಯಸುತ್ತಾನೆ. ಆದರೆ ತಂದೆಯ ಕೊಲೆಪಾತಕನ ಅನುಗ್ರಹ
ಪಾತ್ರನಾಗಲು ಅವನು ಒಡಂಬಡುವುದಿಲ್ಲ. ಅವನು ತನ್ನ ತಮ
ವೀರಸಿಂಹನೊಡನೆ ಜೌನ್‌ಪುರದ ಸುಲ್ತಾನ ಇಬ್ರಾಹಿಂಶಾಹ

* ೨. ಅದೇ ಪುಟ ೬ ೩. ಅದೇ ಪು ೬ ೪. ಅದೇ ಪು.

ಬಳಿಗೆ ಹೋಗಿ ಅವನ ನೆರವು ಕೋರುತ್ತಾನೆ. ಕೊನೆಗೆ ಅವನ ಸಹಾಯದಿಂದ ಅಸ್ಲಾಂನನ್ನು ಗೆದ್ದು ತನ್ನ ರಾಜ್ಯವನ್ನು ಮರಳಿ ಪಡೆಯುತ್ತಾನೆ.

ಇಷ್ಟೇ ಇದರ ಕಥಾವಸ್ತು. ಆದರೆ ಕೃತಿಯ ಹಿರಿಮೆ ಯಿರುವುದು ಅದರ ವರ್ಣನೆಗಳಲ್ಲಿ. ಜೌನಪುರದ ಕೋಟೆ, ಪೇಟೆ, ಯುದ್ಧ, ರಣ ಪ್ರಯಾಣ, ವೇಶ್ಯಾವಾಟ ಇವುಗಳ ಅತ್ಯಂತ ಸಹಜವೂ ಸರಸವೂ ಆದ ವರ್ಣನೆಯಿದೆ. ಮುಸಲ್ಮಾನರ ಅತ್ಯಾಚಾರದ ವರ್ಣನೆಯಂತೂ ಕರುಣಭೀಷಣವಾಗಿದೆ.

"ಅತಿಗಹ ಸಮರ ಷೋಏಷಾಏ ಲೇ ಭಾಂಗ ಕ ಗುಂಡಾ |
ವಿಸು ಕಾರಣ ಹಿ ಕೋಹಾಏ ವಏನ ತಾತಲ ತಮುಕುಂಡಾ ||
ತುರುಕ ತೋಷಾರಹಿಂ ಚಲಲ ಹಾಟ ಭಮಿ ಹೇಡಾ ಮಂಗಇ|
ಆಡೀ ಡೀಥಿ ನಿಹಾರಿ ದವಲಿ ದಾಢೀ ಥುಕವಾಹಇ "* ೫

ಆ ತುರುಕ ಅತ್ಯಂತ ಶ್ರದ್ಧೆಯಿಂದ ಖುದಾನನ್ನು ಸ್ಮರಿಸುತ್ತ ಮಾಂಸ ತಿನ್ನುತ್ತಾನೆ. ಕಾರಣ ವಿಲ್ಲದೆಯೇ ಕೋಪಗೊಳ್ಳುತ್ತಾನೆ ಕೆಡೆನುಡಿಯುತ್ತಾನೆ. ಅವನ ಮುಖತಪ್ತ ತಾಮ್ರ ಕುಂಡ ದಂತಿರುತ್ತದೆ. ತುರುಕಪೇಟೆಯಲ್ಲಿ ಸುತ್ತುತ್ತಾನೆ. ಅಡ್ಡ ನೋಟ ಬೀರುತ್ತಾನೆ. ಅವನ ಗಡ್ಡದ ಮೇಲೆ ಜೊಲ್ಲು ಹರಿಯು ತ್ತಿರುತ್ತದೆ.

"ಹಿಂದೂ ತುರಕೇ ಮಿಲಲ ವಾಸ

---

೫ ಅದೇ ಪು. ೪೦.

ಏಕಕ ಧರ್ಮೇ ಅಓಕಾ ಉಪಹಾಸ ;
ಕತಹು ಬಾಂಗ್ ಕತಹು ವೇದ
ಕತಹು ಬಿಸಿಮಿಲ, ಕತಹು ಛೇದ ;
ಕತಹು ಓಝಾ ಕತಹು ಖೋಜಾ,
ಕತಹು ನಕತ ಕತಹು ರೋಜಾ "*

" ಹಿಂದೂ ಮುಸಲ್ಮಾನರು ಒಂದಾಗಿ ಬಾಳುವುದು ಒಬ್ಬ ಮತ್ತೊಬ್ಬನ ಧರ್ಮವನ್ನು ಉಪಹಾಸ ಮಾಡಿದಂತೆ. ಅಜಾನ್‌ನ ಬಾಂಗ್ (ಕೂಗು) ಎಲ್ಲಿ, ವೇದಪಾಠವೆಲ್ಲಿ ? ಬಿಸ್ಮಿಲ್ಲಾ ಎಲ್ಲಿ, ಕಿವಿ ಚುಚ್ಚುವುದೆಲ್ಲಿ ? ಓಝಾ ಎಲ್ಲಿ ಖ್ವಾಜಾ ಎಲ್ಲಿ ? ನಕ್ತ ವ್ರತವೆಲ್ಲಿ, ರೋಜಾ ಎಲ್ಲಿ ? ಜೊಂಬೆಲ್ಲಿ, ಹೂಜಿಯೆಲ್ಲಿ ? ನಮಾಜೆಲ್ಲಿ, ಪೂಜೆಯೆಲ್ಲಿ ? ಒಂದು ಕಡೆ ಯಾವನೋ ಮುಸಲ್ಮಾನ ಹಾದಿಯಲ್ಲಿ ಹೋಗುತ್ತಿರುವ ಹಿಂದುವನ್ನು ಜೀತಕ್ಕಾಗಿ ಹಿಡಿದುಕೊಂಡು ಹೋಗುತ್ತಿದ್ದಾನೆ. ಬ್ರಾಹ್ಮಣರ ಹುಡುಗರನ್ನು ಹಿಡಿದುಕೊಂಡು ಹೋಗಿ ಅವನ ತಲೆಯ ಮೇಲೆ ಹಸುವಿನ ಕರುವನ್ನು ಏರಿಸುತ್ತಾನೆ. ಅವನ ' ನಾಮ 'ವನ್ನು ನೆಕ್ಕುತ್ತಾನೆ. ಅವನ ಜನಿವಾರವನ್ನು ಕಿತ್ತು ಹಾಕಿ ಅವನ ಮೇಲೆ ಕುದುರೆ ಓಡಿಸ ಬಯಸುತ್ತಾನೆ. ಭತ್ತದಿಂದ ಹೆಂಡ ತಯಾರಿಸುತ್ತಾನೆ. ದೇವಸ್ಥಾನಗಳನ್ನು ಕೆಡವಿ ಮಸೀದಿ ಕಟ್ಟಿಸುತ್ತಾನೆ. ಗೋರಿ ಗುಮ್ಮಟಗಳಿಂದ ಭೂಮಿ ತುಂಬಿಹೋಗಿದೆ. ಕಾಲಿಡಲೂ ತೆರಹಿಲ್ಲ! ಹಿಂದುವನ್ನು ಕರೆದು ಬಾಯಿಗೆ ಬಂದಂತೆ ಬೈದು ಅಟ್ಟುತ್ತಾನೆ. ಒಬ್ಬ ಸಣ್ಣ ತುರುಕ ಕೂಡ ಹಿಂದುವನ್ನು

* ೬. ಅದೇ ಪು. ೪೨ ೬. ಅದೇ ಪು. ೩೦.

ಅಟ್ಟಿಸಿಕೊಂಡು ಹೋಗಿ ಕೊಲ್ಲುತ್ತಾನೆ. ತುರುಕರು ಹಿಂದೂ ಗಳೆಲ್ಲರನ್ನೂ ನುಂಗಿ ನೊಣೆಯುವಂತೆ ಕಾಣುತ್ತದೆ."

ಪೇಟೆಯ ವರ್ಣನೆಯೂ ಸಜೀವವಾಗಿದೆ :—

"ಮಧ್ಯಾಹ್ನದ ಜನಸಮೂಹ! ಇಡೀ ಭೂಮಂಡಲದ ವಸ್ತುವೆಲ್ಲ ಇಲ್ಲಿಗೆ ಮಾರಾಟಕ್ಕೆ ಬಂದಿರುವಂತೆ ಕಾಣುತ್ತದೆ. ಜನರ ತಲೆಗೆ ತಲೆ ತಗಲುತ್ತದೆ. ಒಬ್ಬನ ಹಣೆಯ ನಾಮ ಮತ್ತೊಬ್ಬನ ಹಣೆಗೆ ಅಂಟಿಕೊಳ್ಳುತ್ತಿತ್ತು! ಹೆಂಗಸರ ಬಳೆ ಆ ಗುಂಪಿನಲ್ಲಿ ಒಡೆದು ಚೂರು ಚೂರಾಗುತ್ತಿತ್ತು, ಬ್ರಾಹ್ಮಣನ ಜನಿವಾರ ಚಂಡಾಲನ ಎದೆಗೆ ಗೋಜಿಕೊಳ್ಳುತ್ತಿತ್ತು, ವೇಶ್ಯೆಯರ ಪಯೋಧರಗಳು ಯತಿಯ ಎದೆಗೆ ಡಿಕ್ಕಿ ಬಡೆಯುತ್ತಿದ್ದವು. ಆನೆ ಕುದುರೆಗಳ ಗೊಂದಲವಂತೂ ಹೇಳತೀರದು. ಕೆಲವು ಬಡಪಾಯಿಗಳಂತೂ ಕಾಲ ತುಳಿತಕ್ಕೆ ಸಿಕ್ಕಿ ನರಳುತ್ತಿದ್ದರು. ಜನ ಸಂಚಾರದ ಗದ್ದಲದಿಂದ ಅದು ನಗರವಲ್ಲ ಜನ ಸಮುದ್ರ ಎನ್ನಿಸುತ್ತಿತ್ತು. ತಿರುಗುವ್ಯಾಪಾರಿ ತಿರುಗಿ-ತಿರುಗಿ ಕ್ಷಣದಲ್ಲಿ ತನ್ನ ಸರಕನ್ನು ಮಾರಿಬಿಡುತ್ತಿದ್ದ. ಎಲ್ಲರೂ ಒಂದಲ್ಲ ಒಂದು ಸಾಮಾನನ್ನು ಕೊಂಡು ಕೊಂಡು ಹೋಗುತ್ತಿದ್ದರು."

ಗಜಸೇನೆಯ ವರ್ಣನೆ ಅತ್ಯಂತ ಓಜೋಮಯವಾಗಿದೆ.

"ಪಥಮುಹಿ ಸಜ್ಜಿಅ ಹಥ್ಥಿವರ, ತೋರಪ ಸಜ್ಜಿ ತುರಂಗ |
ಪಾಇಕ್ಕಹ ಚಕ್ಕಹ ಕೋ ಗಣಇ ಚಲಿಅ ಸೇನ ಚತುರಂಗ ||
ಅಣಪರತ ಹಾಥಿ, ಮಯಮತ್ತ ಜಾಥಿ,
ಭಾಗಂತೇ ಗಾಥ, ಚಾಪಂತೇ ಕಾಥ |

ಸಂಗಾಮ ಧೇಘ, ಭೂಮಿಟ್ಟ ಮೇಘ ॥
ಅಂಧಾರ ಕೂಟ, ದಿಗ ವಿಜಯ ಛೂಟ ।
ಗಮರೀಗಗವ್ಹ ದೇಖಂತೇ ಭವ್ವ ।
ಚಾಲಂತೇ ಕಾಣ, ಪವ್ವಅ ಸಮಾನ ॥” ೮

“ ಮೊದಲು ಹಸ್ತಿಸೇನೆ ಸಜ್ಜಾಯಿತು. ಅನಂತರ ರಥ ಮತ್ತು ಅಶ್ವಾರೋಹಿಗಳು ಅಣಿಯಾದರು. ಪದಾತಿದಳದ ಎಣಿಕೆಯಾರಿಗೆ ಸಾಧ್ಯ ? ಚತುರಂಗ ಚಮೂ ಚಲಿಸಿತು.

ಅಸಂಖ್ಯ ಆನೆಗಳು ಮದಮತ್ತವಾಗಿ ಸಾಗುತ್ತಿದ್ದವು. ಅವು ಓಡುವಾಗ ದಾರಿಯ ಮರಗಳನ್ನು ಉರುಳಿಸುತ್ತ ಹೋಗುತ್ತಿದ್ದವು. ಘೀಳಿಡುತ್ತ ಕುದುರೆಗಳನ್ನು ಕೊಲ್ಲುತ್ತಿದ್ದವು. ಅವು ನೆಲದ ಮೇಲೆ ಮೋಡ ನಿಂತಿದೆಯೋ ಎನ್ನುವಂತೆ, ಕತ್ತಲೆಯ ಬೆಟ್ಟವೋ ಎನ್ನುವಂತೆ ಯುದ್ಧ ಭೂಮಿಗೆ ತೆರಳಿದವು. ಮೈವೆತ್ತ ಗರ್ವದಂತೆ ಅವು ಭವ್ಯ ಸುಂದರವಾಗಿದ್ದವು. ಪರ್ವತವೇ ಕಿವಿಯಲ್ಲಾಡಿಸುತ್ತಿರುವಂತೆ ಅವು ಮುಂದೆ ನುಗ್ಗುತ್ತಿದ್ದವು.

“ ದೊಡ್ಡ ದೊಡ್ಡ ಮುಂಡಗಳನ್ನು ಮುರಿದು ಹತ್ತು ಮಡಿ ಮುಂಡಗಳನ್ನು ವಿಧಾತ ವಿದ್ಯಾಚಲದಿಂದ ಕೆಳಕ್ಕೆ ತಳ್ಳಿದ್ದಾನೆಯೋ ಎನ್ನುವಂತಿತ್ತು ಅವುಗಳ ಹಾವಳಿ. ಅಗಸ್ತ್ಯ ಋಷಿಯ ಆಜ್ಞೆಯನ್ನು ಮೀರಿ ಪರ್ವತ ಬೆಳೆದುಬಂದು ಬಿಟ್ಟಿತೋ ಎನ್ನುವಂತೆ ಭಯಂಕರವಾಗಿ ಆ ಆನೆಗಳು ಹೋರಾಡುತ್ತಿದ್ದವು.

---

೮ ಅದೇ ಪು. ೮೨.

ಮಾವಟಿಗನ ಅಂಕುಶಕ್ಕೆ ಅವು ಬಹು ಕಷ್ಟದಿಂದ ಮಣಿಯು ತ್ತಿದ್ದವು."

ಈ ರೀತಿ ವಿದ್ಯಾಪತಿಯ ಕಾವ್ಯದಲ್ಲಿ ವಾಸ್ತವಿಕತೆ ಒಂದು ವಿಧವಾದ ನವೀನ ಸೌಂದರ್ಯದಿಂದ ಒಡಮೂಡಿದೆ. ಆತ ಒಂದೆಡೆ ಕೀರ್ತಿಸಿಂಹನ ಸರ್ಪ ದರ್ಪವನ್ನು ಚಿತ್ರಿಸಿದರೆ ಮತ್ತೊಂದೆಡೆ ಆತನ ದುರವಸ್ಥೆಯನ್ನೂ ಮರೆ ಮಾಚಿಲ್ಲ. ವಿದ್ಯಾಪತಿಯು ಈ ಸತ್ಯ ನಿಷ್ಠೆಯಿಂದ ಕೀರ್ತಿಸಿಂಹನ ಪಾತ್ರಕ್ಕೆ ಜೀವಂತ ಕಳೆ ಕಟ್ಟಿದೆ. ವಿದ್ಯಾಪತಿಯ ಲೇಖನಿ ನೆಳಲು ಬೆಳಕುಗಳ ಸಾಮಂಜಸ್ಯದಿಂದ ಚಿತ್ರರಚಿಸುವ ಚಿತ್ರಕಾರನ ಕುಂಚವಲ್ಲ. ಅದು ಭಿತ್ತಿ ಗಾತ್ರ ಮೂರ್ತಿಗಳನ್ನು ಕಂಡರಿಸುವ ಶಿಲ್ಪಿಯ ಉಳಿ. ನಾವು ಆತನು ಕಡೆದು ಕಂಡರಿಸುವ ಮೂರ್ತಿಯ ಉಬ್ಬು ತಗ್ಗುಗಳನ್ನೂ ನೋಡಬಹುದು. ಅಷ್ಟೇ ಅಲ್ಲ, ಆತನ ಲೇಖನಿಯೊಂದು ಯಕ್ಷದಂಡ. ಅದನ್ನು ಒಮ್ಮೆ ತಿರುವಿದರೆ ಸಾಕು ರಾಧಾಕೃಷ್ಣರ ಪ್ರೇಮಸಾಮ್ರಾಜ್ಯ, ಮತ್ತೊಮ್ಮೆ ತಿರುವಿದರೆ ರಣರಂಗದ ರುದ್ರ ಭೀಕರ ಚಿತ್ರ, ನೆತ್ತರ ಹೊನಲು, ಗರ್ಭನಿರ್ಭೇದಕವಾದ ವಾದ್ಯರವ! ಅವನ ಕಾವ್ಯದಲ್ಲಿ ನಾವು ವೇಶ್ಯೆಯರ ನೂಪುರ ರಣನ, ವಿರಹಿಗಳ ಚೀತ್ಕಾರದಂತೆಯೇ ಯುದ್ಧ ಭೂಮಿಯ ಪಟಹ, ತೂರ್ಯಗಳ ಗಗನ ಭೇದಕನಾದವನ್ನೂ ಕೇಳಬಹುದು. ವಿದ್ಯಾಪತಿಯ 'ಕೀರ್ತಿಲತಾ' ಒಂದು ಸಫಲ ಚರಿತ್ರಕಾವ್ಯ. 'ಆತನ ಕೀರ್ತಿ ಪತಾಕಾ' ಇನ್ನೂ ಬೆಳಕನ್ನು ಕಂಡಿಲ್ಲ.

# ಪ್ರಕೃತಿ

ವಿದ್ಯಾಪತಿ ಪ್ರಕೃತಿಯ ಅನನ್ಯ ಆರಾಧಕ. ಪ್ರಕೃತಿಯನ್ನು ಆತ ಆಲಂಬನವಾಗಿ, ಉದ್ದೀಪನವಾಗಿ, ಹಾಗೂ ಅಲಂಕರಣವಾಗಿ ಬಳಸಿದ್ದಾನೆ. ವಸಂತ ಋತುವಿನ ಮಾದಕತೆ, ಕಿಸಲಯವಸನವಿಭೂಷಿತಳಾದ ವನದೇವಿ, ಕುಸುಮಿತಕಾನನ, ಕಾದಲರನ್ನು ಕಾಡುವ ಕೋಗಿಲೆಯ ಕೂಜನ, ಇವುಗಳನ್ನು ಕವಿ ಅತ್ಯಂತ ಆತ್ಮೀಯತೆಯಿಂದ ಚಿತ್ರಿಸಿದ್ದಾನೆ. ಇಷ್ಟೇ ಅಲ್ಲ ಮಳೆಗಾಲದ ಭೀಕರತೆ, ಮೈಕೊರೆವ ಚಳಿ ಮೊದಲಾದ ಪ್ರಕೃತಿಯ ರೌದ್ರ ರೂಪವನ್ನು ಆತ ಅತ್ಯಂತ ಸಹಜವಾಗಿ ಬಣ್ಣಿಸಿದ್ದಾನೆ.

ವಸಂತನ ರಾಜ್ಯವನ್ನು ನೋಡಿ:—

ಬಂದ ಋತುಪತಿ ವಸಂತ
ಹಿಡಿಯಿತು ಅಲಿಕುಲ ಮಾಧವಿಪಂಥ ||
ದಿನಕರ ಕಿರಣವಾಯಿತು ಪ್ರಚಂಡ |
ಹೂವು ಹಿಡಿಯಿತು ಕೇಸರದಂಡ ||
ನೃಪನ ಆಸನ ಪಾಟಲಿ ಪತ್ರ |
ಧರಿಸಿಹ ಕಾಂಚನ ಕುಸುಮ ಛತ್ರ ||

ಹಣೆಗೆ ಕಟ್ಟಿಹ ಮಾವಿನ ಮುಕುಲ ಕಿರೀಟ
ಹಾಡುತಿಹುದು ಎದುರಿಗೆ ಕೋಕಿಲ, ಕೀಟ ||

ಕುಣಿವುದು ಶಿಖಿಕುಲ, ಬಾಜಿಪುದು ಅಲಿಕುಲ ಯಂತ್ರ,
ಬಂದು ಹೇಳುತಿಹರು ದ್ವಿಜಗು ಮಂತ್ರ॥*

ಇದೇ ವಸಂತ ವಿರಹದ ಬೇಗೆಯನ್ನು ಹೆಚ್ಚಿಸುವನಾಗುತ್ತಾನೆ :—

ಅರಳಿತು ಕುಸುಮ ಕುಂಜ ಕುಟೀರ ವನದಲಿ
ಪಂಚಮದಿಂಚರವ ಹಾಡಿತು ಕೋಗಿಲೆ ।
ಹಿಮ ಶಿಖಿರವನ್ನೈದಿತು ಮಲೆಯಾನಿಲ
ಮನೆಗೆ ನಲ್ಲ ಮರಳಲಿಲ್ಲವಲ್ಲೆ ।।
ಚಂದಿರ ಚಂದನ ತನುವ ಬೇಯಿಸುತಿದೆ,
ಉಪವನದಲಿ ಮೊರೆಯುತಿಹುದು ಅಲಿಕುಲ
ಸಮಯ ವಸಂತ, ಕಂತನಿಹನು ದೂರದೇಶ,
ವಿಧಿಯೊ ಪ್ರತಿಕೂಲ !
ಅನಿಮಿಷನಯನದಲ್ಲಿ ನಾಥನ ಕಂಡೆ,
ತಣಿಯಲಿಲ್ಲ ಕಣ್ಣು
ಈ ಸುಖಸಮಯದಿ ತಾಳಲಾರೆ ಸಂಕಟ
ಕಠಿಣ ಬಾಳು, ಅನಾಥ ಹೆಣ್ಣು !
ಕ್ಷೀಣ ದಿನ ದಿನಕೆ ತನುವು ಹಿಮಕಮಲಿನಿಯೊಲು
ನಲ್ಲಬರುವ ತನಕ ಬದುಕುವುದೆಂತು ?
ವಿದ್ಯಾಪತಿಯೆಂದ ಧಿಕ್ಕಾರ ಜೀವನಕೆ

---

*ವಿದ್ಯಾಪತಿ ಕೀರ್ತನಾವಲಿ ಪದ ೧೭೫,

ಮಾಧವ ನಿಷ್ಕರುಣಿ ನೀನೆಂತು ? ॥*

ವಿಪ್ರಲಂಭ ಶೃಂಗಾರದಲ್ಲಿ ಉದ್ದೀಪನವಾಗಿ ಕವಿ ಪ್ರಕೃತಿಯನ್ನು ಚಿತ್ರಿಸಿದ್ದಾನೆ. ಷಡೃತು ವರ್ಣನೆಯಂತೆ ಹಿಂದಿಯಲ್ಲಿ ಪ್ರತಿಮಾಸದ ವರ್ಣನೆಯೂ ಬರುತ್ತದೆ. ಇದನ್ನು 'ಬಾರಹ್ ಮಾಸಾ' (ದ್ವಾದಶಮಾಸ) ಎನ್ನುತ್ತಾರೆ. ಈ ವರ್ಣನೆಯಲ್ಲೂ ಕವಿ ತನ್ನ ನೈಪುಣ್ಯವನ್ನು ಮೆರೆದಿದ್ದಾನೆ. ವಿರಹಿಣಿ ರಾಧೆಯ ಈ ವರ್ಣನೆ ನೋಡಿ :—

"ಶರದ ಶಶಿಧರನಿಗೆ ಮುಖರುಚಿಯ ನೊಪ್ಪಿಸಿದಳು
ಹರಿಣಕೆ ನೀಡಿದಳು ಲೋಚನಲೀಲೆಯ |
ಕೇಶಪಾಶವನರ್ಪಿಸಿದಳು ಚಮರೀಮೃಗಕೆ,
ಮನೋಭವನಿಂದ ಪಡೆದಳು ಕಾಮಾಲೆಯ ॥೧॥
ಮಾಧವ, ತೋರದು ಬದುಕುವ ದಾರಿ,
ಪಡೆದುದ ಮರಳಿ ನೀಡುತಿಹಳು ನಾರಿ ॥೨॥
ದಶನದಶೆಯ ಕೊಟ್ಟಳು ದಾಳಿಂಬೆಗೆ,
ಬಂಧುರಕೆ ಹಿಂದಿರುಗಿಸಿದಳು ಅಧರ ರುಚಿಯು,
ದೇಹದಶೆಯ ನೀಡಿದಳು ಮಿಂಚಿಗೆ, ಅಶನಿಗೆ!
ಕಾಡಿಗೆಯ ಕೊಟ್ಟಳು ಶನಿಗೆ ! ॥೩॥
ಭ್ರುಕುಟಿ ಭಂಗವ ಕೊಟ್ಟಳನಂಗಚಾಪಕೆ,
ಕೋಗಿಲೆಗೆ ನೀಡಿದಳು ವಾಣಿ
ಉಳಿಸಿಹಳು ಬರಿಯ ದೇಹನೇಹವ ಕಲ್ಯಾಣಿ !/

---

*ಅದೇ ೨೦೧. /ಅದೇ ೨೧೪.

ಇದೇ ರೀತಿ ಕವಿ ಬೆಳದಿಂಗಳು, ಚಳಿ, ತಂಗಾಳಿ ಮೊದಲಾದವುಗಳ ಅತ್ಯಂತ ಸಹಜ ವರ್ಣನೆ ಮಾಡಿದ್ದಾನೆ. ಇಲ್ಲೆಲ್ಲ ಕವಿಯ ಸೌಂದರ್ಯ ಪ್ರೇಮ ಎದ್ದು ಕಾಣುತ್ತದೆ.

# ಭಕ್ತಿ

ವಿದ್ಯಾಪತಿ ಭಕ್ತನೇ ಶೃಂಗಾರಿಯೇ ಎಂಬ ವಿಷಯದಲ್ಲಿ ಹಿಂದಿಯಲ್ಲಿ ಸಾಕಷ್ಟು ವಾದ ವಿವಾದ ನಡೆದಿದೆ. ಅವನು ಬರಿಯ ಶೃಂಗಾರೀಕವಿ, ಅವನಲ್ಲಿ ಭಕ್ತಿಯಗಂಧವೂ ಇಲ್ಲ ಎನ್ನುವವರೂ ಇದ್ದಾರೆ. ಆದರೆ ವಿದ್ಯಾಪತಿಯ ಪದಗಳನ್ನು ಕೇಳಿ ಚೈತನ್ಯ ಮಹಾಪ್ರಭು ಆನಂದದಿಂದ ಮೈ ಮರೆತು ಮೂರ್ಛೆ ಹೋದರಂತೆ.ಅವು ಬರಿಯ ಶೃಂಗಾರ ಗೀತೆಗಳಾಗಿದ್ದರೆ ಭಕ್ತ ಶ್ರೇಷ್ಠರಾದ ಚೈತನ್ಯ ಮಹಾಪ್ರಭು ಅವುಗಳನ್ನು ಕೇಳಿ ಭಾವ ವಿರಶರಾಗುತ್ತಿರಲಿಲ್ಲ. ಅಷ್ಟೇ ಅಲ್ಲ ಬಂಗಾಳಿಗಳು ಆತನನ್ನು ' ಪರಮ ಭಾಗವತ ' ನೆಂದು ಪರಿಗಣಿಸಿ ಆತನ ಕೀರ್ತನೆಗಳನ್ನು ಹಾಡಿ ಭಕ್ತಿ ಪರವಶರಾಗುತ್ತಾರೆ. ಮತ್ತೆ ಕೆಲವರು ವಿದ್ಯಾಪತಿ ಶಿವಭಕ್ತ, ಆತನ ಶೈವಸಂಬಂಧವಾದ ಕೀರ್ತನೆಗಳಲ್ಲಿ ಭಕ್ತಿ ಇದೆ, ರಾಧಾಕೃಷ್ಣರನ್ನು ಕುರಿತ ಕೀರ್ತನೆಗಳು ಶೃಂಗಾರದವು ಎನ್ನುತ್ತಾರೆ. ರಾಧಾಕೃಷ್ಣರ ಸ್ಥೂಲ ಶೃಂಗಾರ ವರ್ಣನೆಯೇ ಈ ಗೊಂದಲಕ್ಕೆ ಕಾರಣವಿರಬಹುದು. ಆದರೆ ವಿದ್ಯಾಪತಿ ಬಂಗಾಳದ ಸಹಜಿಯಾ ವೈಷ್ಣವ ಪಂಥದಿಂದ ಪ್ರಭಾವಿತನಾಗಿದ್ದ. ಸಹಜಿಯಾ ವೈಷ್ಣವನಾದ ಚಂಡೀದಾಸ ತನ್ನ ಪ್ರೇಯಸಿಯಾದ ರಾಮಿ ಎಂಬ ಅಗಸಗಿತ್ತಿಯನ್ನು ರಾಧೆಯನ್ನಾಗಿ ಕಂಡು ಉಪಾಸಿಸಿದ್ದ. ಮಾನವೀಯ ಭೂಮಿಕೆಯಲ್ಲೇ ದೈವವನ್ನು ಕಂಡ ಆ ಪಂಥದ ಹಿನ್ನೆಲೆಯಲ್ಲಿ ವಿದ್ಯಾಪತಿಯ

ಕೀರ್ತನೆಗಳನ್ನು ನೋಡಬೇಕು. ನಮ್ಮ ಅಭಿಪ್ರಾಯದಲ್ಲಿ ವಿದ್ಯಾಪತಿ ರಾಧಾಕೃಷ್ಣರ ಲೀಲೆಗಳನ್ನು ಕುರಿತು ಬರೆದ ಪದಗಳೆಲ್ಲ ಶೃಂಗಾರಮಯವೆನ್ನುವುದಾಗಲೀ, ಎಲ್ಲ ಭಕ್ತಿಮಯ ಎನ್ನುವುದಾಗಲೀ ತಪ್ಪು. ಆತನ ರಾಧಾಕೃಷ್ಣ ಗೀತಗಳಲ್ಲಿ ಕೆಲವಾದರೂ ಭಕ್ತಿಪೂರ್ಣವಾಗಿವೆ.

ವಿದ್ಯಾಪತಿ ಬರಿಯ ಶೃಂಗಾರಿಯೇ ಅಲ್ಲ ಭಕ್ತನೂ ಹೌದು ಎಂದು ಹೇಳುತ್ತ ದಿನೇಶಚಂದ್ರಸೇನರು ಹೀಗೆ ಅಭಿಪ್ರಾಯಪಡುತ್ತಾರೆ :– " ವಿದ್ಯಾಪತಿ ತನ್ನ ಕಾವ್ಯದ ಅಂತಿಮ ಭಾಗದಲ್ಲಿ ಆಧ್ಯಾತ್ಮದತ್ತ ಒಲವನ್ನು ತೋರಿ ತನ್ನ ಇಡೀ ಕಥೆಗೆ ಆಧ್ಯಾತ್ಮಿಕ ಅರ್ಥ ನೀಡುತ್ತಾನೆ. ಹಾಗಿಲ್ಲದಿದ್ದರೆ ಅವನ ಪದಗಳು ಧಾರ್ಮಿಕ ಸಾಹಿತ್ಯವೆನ್ನಿಸಿಕೊಳ್ಳುತ್ತಿರಲಿಲ್ಲ. ಇದಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡಬಹುದು. ರಾಧೆ ಕೃಷ್ಣನನ್ನು ಹೀಗೆ ವರ್ಣಿಸುತ್ತಾಳೆ. " ಕೃಷ್ಣ ನನ್ನ ಮುಡಿಯೇರುವ ಹೂವು ; ನನ್ನ ಕಂಗಳ ಚೆಲುವನ್ನು ಹೆಚ್ಚಿಸುವ ಕಾಡಿಗೆ ; ನನ್ನ ಕೊರಳಿಗೆ ಗೋಜಿಕೊಂಡಿರುವ ರತ್ನಹಾರ. ಆತನಿಲ್ಲದ ಬದುಕನ್ನು ನಾನು ಊಹಿಸಲೂ ಆರೆ. ಆತ ನನಗೆ ಮೀನಿಗೆ ನೀರಿದ್ದ ಹಾಗೆ, ಹಕ್ಕಿಗೆ ರೆಕ್ಕೆಯಿದ್ದ ಹಾಗೆ ; ನನ್ನ ಬಾಳ ಉಸಿರು. ನನ್ನ ಬಾಳಿನ ಏಕೈಕ ಆಧಾರ. ಈ ರೀತಿ ಆಕೆ ಆತನ ಪ್ರೇಮದಲ್ಲಿ ಮುಳುಗಿ ಹೋಗಿದ್ದಾಳೆ. ಆದರೆ ಇಷ್ಟೆಲ್ಲ ಹೇಳಿದರೂ ಅಂತರಂಗದಿಂದ ಪ್ರೇಮಿಸಿದರೂ ಆಕೆ ಆತನನ್ನು ಅರಿಯದಾಗಿದ್ದಾಳೆ. ಕೃಷ್ಣ ಆಕೆಗೆ ಅಜ್ಞೇಯನಾಗಿಯೇ ಉಳಿದಿದ್ದಾನೆ.

ಕೊನೆಗೆ ಅವಳು ಥಟ್ಟನೆ ಅತ್ಯಂತ ಹೃದಯವಿದಾರಕವಾಗಿ ರೋದಿಸುತ್ತಾಳೆ–" ನೀನಾರು ? ಹೇಳು ಕೃಷ್ಣ. " ಈ ಕರುಳಿನ ಕೂಗು ನಿಜಕ್ಕೂ ಹೃದಯಾಂತರಾಳದ. ಆತ್ಮದ ಕೂಗು. ಅನಂತದ ಮುಂದೆ ಸಾಂತದ ದೈನ್ಯವಿಜಡಿತವಾಣಿ.

' ಮಧುರಾ ' ಎಂಬ ಹೆಸರಿನ ಪದಗಳಲ್ಲಿ ಕೃಷ್ಣನ ಗೋಕುಲ ನಿರ್ಗಮನದ ಪ್ರಸಂಗವನ್ನು ಕವಿ ಅತ್ಯಂತ ಮನೋ ವೇಧಕವಾಗಿ ಚಿತ್ರಿಸಿದ್ದಾನೆ. ' ಕೃಷ್ಣ ಮಧುರೆಗೆ ಹೋದ. ಅಯ್ಯೋ ಗೋಕುಲ ತಬ್ಬಲಿಯಾಯಿತು. ಪಂಜರದ ಗಿ ಗೋಳಿಡುತ್ತಿದೆ. ಗೋವುಗಳು ಮಧುರೆಯತ್ತಲೇ ಗೋಣ ಹಾಕಿ ನಿಟ್ಟುಸಿರು ಬಿಡುತ್ತಿವೆ. ಯಮುನೆಯ ತಡಿಯಲ್ಲಿ ಗೋವಳರು ವಿಚರಿಸುತ್ತಿಲ್ಲ. ಸಖಿ, ಕೃಷ್ಣನಿಲ್ಲದೆ ಹಾಳು ಹಾಳ ಸುರಿಯುತ್ತಿರುವ ಯಮುನಾ ತೀರಕ್ಕೆ ನಾನು ಹೇಗೆ ಹೋಗಲಿ ? ಅವನಿಲ್ಲದ ಲತಾ ಮಂಟಪವನ್ನು ಹೇಗೆ ನೋಡಲಿ? ಕೃಷ್ಣ ಗೋಪಿಕೆಯರು ವಿಹರಿಸುತ್ತಿದ್ದ ತೋಪು ಇಂದು ಶೂನ್ಯವಾಗಿದೆ. ಅದನ್ನು ನೋಡಿಯೂ ಹೇಗೆ ಬದುಕಿರಲಿ ?

ದೂತಿಯರು ಕೃಷ್ಣನ ಆಗಮನದ ಸುದ್ದಿಯನ್ನು ರಾಧೆಗೆ ತಿಳಿಸುತ್ತಾರೆ. ಆದರೆ ರಾಧೆ ಮರಣಾವಸ್ಥೆಯಲ್ಲಿದ್ದಾಳೆ. ಅವಳ ಉದ್ಗಾರವನ್ನು ಕೇಳಬೇಕು :–

" ಹಿಮಕರ ಕಿರಣದಿಂದ ಕಮಲ ಕಮರಿಹೋದರೆ ಮಧು ಮಾಸ ಬಂದೇನು ಪ್ರಯೋಜನ? ಮೊಳಕೆಯೆಲ್ಲ ಉರಿಬಿಸಿಲಿನಲ್ಲಿ ಬೆಂದು ಹೋದ ಮೇಲೆ ಮಳೆ ಬಂದರೆಷ್ಟು ಬಿಟ್ಟರೆಷ್ಟು ?

ಬಾಯಾರಿಕೆಯಿಂದ ಬಸವಳಿದು ನಾನು ಕಡಲತಡಿಗೋಡಿದೆ. ಆದರೆ ನನ್ನ ದೌರ್ಭಾಗ್ಯ ಬಾಯಾರಿಕೆಯನ್ನು ನೀಗಿಸಲು ಒಂದು ಹನಿಯಾದರೂ ನೀರಿಲ್ಲ! ಅಲ್ಲಿಂದ ಬಳಲಿ ಗಂಧದಮರದ ಬಳಿಗೆ ಓಡಿದೆ! ಆದರೇನು? ಗಂಧವೆಲ್ಲತೀರಿತ್ತು. ಬೇಗೆಯಿಂದ ಬೆಂದು ಚಂದ್ರಿಕೆಯತ್ತ ಧಾವಿಸಿದೆ. ಆದರೆ ಚಂದ್ರ ಬೆಂಕಿಯ ಮಳೆಗರೆದ. ಊರನ್ನೇ ಕೊಚ್ಚಿಹಾಕುವ ಶ್ರಾವಣ ನನ್ನ ಪಾಲಿಗೆ ಶೂನ್ಯನಾಗಿದ್ದ. ಅವನ ಬಳಿ ಒಂದು ಹನಿ ನೀರೂ ಇರಲಿಲ್ಲ. ಕಲ್ಪತರು ಕೂಡ ನನ್ನ ಪಾಲಿಗೆ ಬಂಜೆಯಾಗಿದೆ! ಇದೆಲ್ಲವನ್ನೂ ಕಂಡು ಕವಿ ವಿದ್ಯಾಪತಿ ವಿಸ್ಮಯವಿಮೂಕನಾಗಿದ್ದಾನೆ."

ಇಲ್ಲೆಲ್ಲ ಬರುವ ಸಮುದ್ರ, ಚಂದನತರು, ಬೆಳದಿಂಗಳು ಇವೆಲ್ಲ ಕೃಷ್ಣನನ್ನು ಕುರಿತ ಉಪಮೆಗಳೇ! ಈ ರೀತಿ ಆಕೆ ಎಲ್ಲೆಲ್ಲೂ ಆತನ ಸರ್ವವ್ಯಾಪಕತ್ವವನ್ನೇ ಅಪಾರ,ಕರುಣೆಯನ್ನೇ ಕಾಣುತ್ತಾಳೆ.

ಕೃಷ್ಣನನ್ನು ಕಾಣದೆ ರಾಧೆ ಉಳಿಯಲು ಸಾಧ್ಯವಿಲ್ಲ. ಅವಳ ಬಯಕೆಯಾದರೂ ಏನು? "ನಾನು ಸಾಯುತ್ತೇನೆ, ನಿಜಕ್ಕೂ ಪ್ರಾಣತ್ಯಾಗ ಮಾಡುತ್ತೇನೆ. ಆದರೆ ಕೃಷ್ಣನನ್ನು ಯಾರಿಗೆ ಒಪ್ಪಿಸಿ ಹೋಗಲಿ? ಓ ನನ್ನ ಸಖಿಯರೇ, ನಾನು ಕಡೆಯುಸಿರೆಳೆಯುವಾಗ ನನ್ನ ಮೈಮೇಲೆಲ್ಲ ಕೃಷ್ಣ ಕೃಷ್ಣ ಎಂದು ಬರೆಯಿರಿ. ಅಂತರಂಗದ ಗೆಳತಿ ಲಲಿತೆ, ನನ್ನ ಕಿವಿಯಲ್ಲಿ ಕೊನೆಯ ಸಲ ಬೀಳುವ ಶಬ್ದ 'ಕೃಷ್ಣ' ಎಂದಿರಲಿ. ನನ್ನ ದೇಹವನ್ನು ಸುಡಬೇಡಿ, ಅಥವಾ ನದಿಯಲ್ಲೂ ತೇಲಿಬಿಡಬೇಡಿ,

ಅದನ್ನು ಒಂದು ಹೊಂಗೆಯ ಮರಕ್ಕೆ ಬಿಗಿದು ಹಾಕಿರಿ. ಆ ತಮಾಲಶ್ಯಾಮಲ ಛಾಯೆಯಲ್ಲಿ ನಾನು ಒರಗಿರ ಬಯಸುತ್ತೇನೆ. ಕೃಷ್ಣ ಏನಾದರೂ ಅಕಸ್ಮಾತ್ತಾಗಿ ಅತ್ತ ಬಂದರೆ ಅವನ ದರ್ಶನ ಮಾತ್ರದಿಂದಲೇ ನನ್ನಲ್ಲಿ ಪ್ರಾಣ ಸಂಚಾರವಾದೀತು! ನನ್ನ ಕಿವಿಯಲ್ಲಿ ಶ್ಯಾಮನಾಮಗಾನ ಮಾಡಿರಿ, ಅದನ್ನು ಕೇಳುತ್ತ ಕೇಳುತ್ತ ಈ ಕಠಿಣ ಪ್ರಾಣ ಹೊರ ಹೋಗಲಿ.*

ಈ ಗೀತಗಳಲ್ಲೆಲ್ಲ ಪರಮಾತ್ಮನನ್ನು ಕುರಿತ ಜೀವದ ಮೊರೆ, ಅನಂತವೇದನೆ, ಆತ್ಮನಿವೇದನೆ ಹೊರ ಹೊಮ್ಮಿದೆ. ಆದ್ದರಿಂದ ಇಂಥ ಗೀತಗಳನ್ನೆಲ್ಲ ಬರಿಯ ಶೃಂಗಾರ ಗೀತವೆನ್ನು ವುದರಲ್ಲಿ ಅರ್ಥವಿಲ್ಲ. ದಿನೇಶಚಂದ್ರಸೇನರು ಹೇಳುವಂತೆ These love songs as I have said cannot be dissociated from their pervading religious idea"

ಇವುಗಳನ್ನು ಕಡೆಗಣಿಸಿ ವಿದ್ಯಾಪತಿ ಕೇವಲ ಶೃಂಗಾರ ಕವಿ ಎನ್ನುವುದು ಆತನಿಗೆ ಅನ್ಯಾಯ ಮಾಡಿದಂತೆ. ಇನ್ನು ಶಿವ, ಪಾರ್ವತಿ, ಹರಿಹರನನ್ನು ಕುರಿತ ಆತನ ಗೀತಗಳಂತೂ ಆತನ ಆತ್ಮ ಗೀತಾಂಜಲಿಗಳಾಗಿವೆ. ಶಿವನನ್ನು

---

* D. C. Sere. Bengal languages and literature pp 147–148,

೨ ಅದೇ ಪು. ೧೪೯.

ಕುರಿತು ಆತ ಬರೆದ ಗೀತಗಳನ್ನು 'ನಚಾರಿ' ಎನ್ನುತ್ತಾರೆ. ಇಂದಿಗೂ ಅವುಗಳನ್ನು ಮಿಥಿಲೆಯ ಭಾವುಕಜನಹಾಡಿ ಧನ್ಯರಾಗುತ್ತಾರೆ. ಆತನ ಭಕ್ತಿ ನಿರ್ಭರ ಗೀತಗಳಲ್ಲಿ ಆತನ ಹೃದಯ ಕರಗಿ ಹರಿದಿದೆ. ವಿದ್ಯಾಪತಿಯ ಅರ್ಧನಾರೀಶ್ವರ, ಹರಿಹರ, ಗೌರಿ, ಶಿವ ಮೊದಲಾದ ದೇವತೆಗಳ ಸ್ತೋತ್ರ ಸ್ತೋತ್ರಸಾಹಿತ್ಯದ ಅಮೂಲ್ಯ ರತ್ನಗಳು. ಹಿಂದಿಯಲ್ಲಿ ಶೈವ ಸಾಹಿತ್ಯವನ್ನು ರಚಿಸಿದ ಏಕಮೇವ ಕವಿ ವಿದ್ಯಾಪತಿ ಎಂಬುದು ಇಲ್ಲಿ ಗಮನಾರ್ಹ.

ಕೃಷ್ಣನನ್ನು ಕುರಿತು ದೈನ್ಯದಿಂದ ಕವಿ ಗೋಪಿಕೆಯರ ಕೊರಳಲ್ಲಿ ಕುಳಿತು ಹೀಗೆ ಬೇಡುತ್ತಾನೆ :-

"ಕರವ ಪಿಡಿದು ಮುಟ್ಟಿಸೋ ದಡವ
ಕೊಡುವೆ ನಾನು ಸರವ ಮಾಡಬೇಡತಡವ ॥
ಸಖಿಯರೆಲ್ಲ ತೊರೆದು ನಡೆದರೆನ್ನ
ಆವ ಹಾದಿಯಲ್ಲಿ ತಿರುಹಿದರೋ ಚೆನ್ನ ।
ನಾನು ಬರಲಾರೆ ನಿನ್ನ ಬಳಿಗೆ,
ಮತ್ತೆ ಪುಟ್ಟಿದಾ ಕಡುವಹಾದು ಹೋಹೆ ಈ ಘಳಿಗೆ !
ವಿದ್ಯಾಪತಿ ನೀಡುತಿಹನು ಸಾಂತ್ವನ,
ಬಾಲೆ ಭಜಿಸು ಭಗವಂತನ !

## ಅರ್ಧನಾರೀಶ್ವರ ಸ್ತೋತ್ರ :-.-

"ಜಯ ಜಯ ಶಂಕರ ಜಯ ತ್ರಿಪುರಾರಿ ।
ಜಯ ಅರ್ಧಪುರುಷ, ಜಯ ಅರ್ಧನಾರಿ ॥೧॥
ಅರ್ಧ ಧವಳತನು, ಅರ್ಧ ಗೌರ,

ಅರ್ಧ ಸಹಜಕುಚ, ಅರ್ಧಕಠೋರ ॥೨॥
ಅರ್ಧ ಅಸ್ಥಿಮಾಲೆ, ಅರ್ಧಗಜ ಮುಕ್ತಾವಳಿ।
ಅರ್ಧ ಚಂದನ ಶೋಭಿತ ಅರ್ಧ ಭಸ್ಮಧೂಳಿ ॥೩॥
ಅರ್ಧ ಚೇತನಮತಿ, ಅರ್ಧ ಮುಗ್ಧತೆಯ ಅಚ್ಚು!
ಅರ್ಧ ಮೇಖಲೆ, ಅರ್ಧ ಮೌಂಜಿ ಕುಚ್ಚು ॥೪॥
ಅರ್ಧಯೋಗ, ಅರ್ಧಭೋಗವಿಲಾಸ ।
ಅರ್ಧ ಪ್ರಸಾಧನ, ಅರ್ಧ ದಿಗ್ವಾಸ ॥೫॥
ಅರ್ಧಚಂದ್ರ, ಅರ್ಧ ಸಿಂಧೂರ ಶೋಭ !
ಅರ್ಧ ವಿರೂಪ, ಅರ್ಧದಿಂದ ಜಗಕೆ ಲೋಭ ॥೬॥
ಕವಿರತ್ನನೆಂದ ವಿಧಾತನೇ ಬಲ್ಲ,
ಒಂದೆ ಪ್ರಾಣ ಎರಡಾಗಿಹುದಲ್ಲ ॥೭॥*

**ಹರಿಹರ:--**

ಧನ್ಯಹರ ಧನ್ಯಹರಿ ಧನ್ಯ ನಿನ್ನಕಲೆ
ಕ್ಷಣ ಪೀತವಸನ, ಕ್ಷಣವುಡೆ ಪುಲಿದೊವಲೆ ॥
ಕ್ಷಣಪಂಚಾನನ, ಕ್ಷಣ ಚತುರ್ಭುಜ,
ಕ್ಷಣ ಶಂಕರ, ಕ್ಷಣ ಮುರಾರಿದಿವಿಜ॥
ಕ್ಷಣ ಗೋಕುಲ ಕೈದಿ ಕಾವ ಗೋವ
ಕ್ಷಣ ಭಿಕ್ಕೆ ಬೇಡಿಡ ಮರುವನೋವ ॥
ಕ್ಷಣ ಹರಿಯಾಗಿ ಕೊಳುವ ದಾನ ಪ್ರಚಂಡ,
ಕ್ಷಣ ಭಸ್ಮಪೂಸಿ ಪಿಡಿವ ಯೋಗದಂಡ !
ಶರೀರವೊಂದೆ ಧರಿಪ ಎರಡುವಾಸ !
ಕ್ಷಣ ವೈಕುಂಠ, ಕ್ಷಣ ಕೈಲಾಸ !
ವಿದ್ಯಾಪತಿನುಡಿದ ವಿಪರೀತ ವಾಣಿ!
ಓ ನಾರಾಯಣ, ಓ ಶೂಲಪಾಣಿ ॥

---

*ವಿದ್ಯಾಪತಿ ಕೀ ಪದಾವಳಿ. ೨೩೧. ಅದೇ ೨೩೨.

## ಕೃಷ್ಣಸ್ತುತಿ :—.—

ಎಂತು ಬಣ್ಣಿಸಲಯ್ಯ ಹರಿ ನಿನ್ನ
ಎಲ್ಲಿಂದ ತರಲಿ ನಿನ್ನ ಚೆಲುವಿಗೆ ಉಪಮೆಯ,
ಪೇಳೆ ನಾಚಿಕೆ ನುಡಿಗೆ, ಮನಕೆ ಬನ್ನ॥
ಚಂದನದ ಸೌರಭ ಅತಿ ದುರ್ಲಭವಂತೆ
ಆದರದು ಒರಟು ಮರದ ತುಂಡು,

ಚೆಲುವಿಗೆ ಹೆಸರಂತೆ ಚಂದ್ರಮ,
ಆದರವನು ಕೃಷ್ಣ ಪಕ್ಷದಲಿ ಕರಗುವ ಗುಂಡು ॥

ಮಣಿಗೆ ಮಿಗಿಲು ಬೇರೊಂದಿಲ್ಲವಂತೆ,
ಆದರದು ಕಲ್ಲಿಗೆ ಬೇರೆ ಹೆಸರು।

ಕನಕ ಕದಳಿಯ ಚೆಲುವಿಗೆಣೆಯಿಲ್ಲವಂತೆ,
ಆದರದನ್ನು ಬಗ್ಗಿಸಿದೆ ಭಯದ ಕೆಸರು!

ನಿನಗೆ ಸಮ ನೀನೆ ಮಾಧವ,
ಮನಕಿಲ್ಲವಿದರಲಿ ಸಂದೇಹ,

ಸಜ್ಜನರ ಸಂಗ ನೇಹ ಉಚಿತ ಸ್ಥಿರ,
ಇಂತೆಂದ ಕವಿ ವಿದ್ಯಾಪತಿ ಮಿಗಿಲುನೇಹ!

## ಹರಸ್ತುತಿ :—.—

ತೊರೆಯದಿರೆನ್ನ ಹರನೆ, ತೋರು ಮರುಕ।
ಪತಿತರಲಿ ಪತಿತ ನಾನು, ತಿರುಕ ॥

ಇಲ್ಲ ನಿನಗಿಂತ ಪತಿತ ಪಾವನ ಬೇರೆ,
ಇಲ್ಲ ನನಗಿಂತ ಪತಿತ ಬೇರೊಬ್ಬ ತೋರೆ॥
ಜವರಾಯನಿಗೇನ ಹೇಳಲಿ ಉತ್ತರ?

ಗುಣವ ಕೇಳಿದರೇನ ಹೇಳಲಿ, ಹೋಗಲಿ ಆರ ಹತ್ತಿರ?

ಅಂತಕನ ಕಿಂಕರರು ಕೋಪದಿ ಸೆಳೆಯೆ
ಕಾವರಾರು ಮರ್ತ್ಯರಾ ಕೆಳೆ ಕೆಳೆಯೆ ?

ವಿದ್ಯಾಪತಿ ಎಂದ ಪುನೀತವಾಣಿ
ಕೇಳೊ ಜೀವ ಶಂಕರ ಮಹಾದಾನಿ,

ತಲೆವಾಗು ಅಶರಣ ಶರಣ ಶಿವಗೆ,
ದಯೆತೋರು, ಕಾಯೊ, ಶೂಲಪಾಣಿ ||*

ಕವಿಗೆ ಹರನಲ್ಲಿ ಶಿವಶರಣರಂತೆ ಎಲ್ಲಿಲ್ಲದ ಸಲಿಗೆ. ಹರ ನನ್ನು ಹಲವೆಡೆ ಅವನು ಕುಚೋದ್ಯಮಾಡಿದ್ದಾನೆ. ಹರನ ಅತ್ತೆಯ ಗೋಳನ್ನು ಕೇಳಿ:—

ಇರಲಾರೆನವ್ವ ನಾನೀಮನೆಯಲಿ
ಮುದಿ ಅಳಿಯನ ತಂದರೆ
ವಿಧಾತನೊಬ್ಬ ಹಗೆ ಅವನಿಂದ ಬಲು ತೊಂದರೆ!
ಮಗಳ ತಂದೆ ಎರಡನೆಯ ಹಗೆ ಮನೆಯಲಿ !
ಮೂರನೆಯ ಹಗೆ ನಾರದ ಹಾರುವ
ಅಯ್ಯೊ ಮುದಿ ಅಳಿಯ ಬರುವನಲ್ಲವ್ವ !
ಏನಮಾಡಲಿ, ಎಂತು ಜಾರುವ ?
ಅವನು ಬಂದರೆ ಮೊದಲು ಡಮರುವ ಒಡೆವೆನವ್ವ !
ಮತ್ತೆ ಮುರಿವೆ ರುಂಡ ಮಾಲೆಯ,
ಮತ್ತೆ ಓಡಿಸುವೆ ಬಸವ ಕೋಲೆಯ!
ಅಯ್ಯೋ ಮಗಳ ತೊರೆಯಲೆಂತವ್ವ,

---

* ಅದೇ ೨೪೧. ಅದೇ ೨೫೨.

ಪಂಚೆ ಪಂಚಪಾತ್ರೆ, ಪಂಚಾಂಗವ ಕಿತ್ತು ಬಿಸುಡುವೆ!
ನುಡಿದನಾದರೆ ನಾರದ ಬ್ರಾಹ್ಮಣ
ಗಡ್ಡ ಹಿಡಿದು ಜಗ್ಗಿಸಿ ತಳ್ಳುವೆನವನ!
ವಿದ್ಯಾಪತಿಯೆಂದ ಕೇಳವ್ವ ಮಾನಿನಿ!
  ನೆಟ್ಟಗಿರಲಿ ನಿನ್ನ ಜ್ಞಾನ,
ಬೆಳಗಲಿ ಹರಗೌರಿ ಕಲ್ಯಾಣ,
ಜಾಣೆ, ಗೌರಿ ಹರರೊಂದೆ ಕಾಣ*

ಪಾರ್ವತಿ ತನ್ನ ಮುದಿಗಂಡನ ರೂಪವನ್ನು ಹೀಗೆ ಹೇಳಿಕೊಳ್ಳುತ್ತಾಳೆ:—

ಕಂಡೆನವ್ವ ಗೊರವನೊಬ್ಬನ
ಅವನ ರೂಪವನೆಂತು ಬಣ್ಣಿಪೆ|
  ಪಂಚವದನ ಮುಕ್ಕಣ್ಣ ವಿಶಾಲ,
  ಬಟ್ಟೆಯಿಲ್ಲ, ತೊಟ್ಟಹ ಪುಲಿದೊವಲ॥
ತಲೆಯಲಿ ಗಂಗೆ, ತಿಲಕವವಗೆ ತಿಂಗಳೆ,
ಇಂಥ ರೂಪಕಂಡು, ಕಳೆ ದುಗುಡುವ ಹೆಂಗಳೆ!
ಭವಾನಿಯೊಲಿಪ ಭವನನೇನೆಂಬೆ
ಮನಕೆ ಕಾಣದು ಗುಣವಣವು, ಏನೆಂಬೆ !
ಕುಲವಿಲ್ಲ ಶೀಲವಿಲ್ಲ, ಇಲ್ಲ ತಾಯಿ ತಂದೆ, ನನ್ನ ಭಾಗ್ಯಕಿಲ್ಲಿ ಪಡಿಮೆ!
ವಯಸ್ಸು ನಾಲ್ಕು ಯುಗಕಿಂತ ಕೊಂಚ ಕಡಿಮೆ !
ವಿದ್ಯಾಪತಿಯೆಂದ ಕೇಳವ್ವ ಮಾನಿನಿ,
ಈ ಗೊರವ ತಿರುಕನಲ್ಲ, ತ್ರಿಭುವನ ದಾನಿ*

* ಅದೇ ೨೩೫. ಅದೇ ೨೩೬

ನಮ್ಮ ಉರುಟಣೆಯ ಹಾಡುಗಳಂತೆ ಶಿವನನ್ನು ಹೆಂಗಿಸು
ಹಲವಾರು ಹಾಡುಗಳು ವಿದ್ಯಾಪತಿಯಲ್ಲಿ ದೊರೆಯುತ್ತವೆ
ಇಲ್ಲೆಲ್ಲ ಆತನ ಸಖ್ಯಭಕ್ತಿ ಭಕ್ತಿಯ ಸಲಿಗೆ ಚೆಲ್ಲವರಿದಿದೆ
ಶಿವನನ್ನು ಕುರಿತ ಇಂಥ ಭಕ್ತಿಗೀತ, ವಿನೋದ ಹಾಗೂ ಭಕ್ತಿಗ
ವಿಲಕ್ಷಣ ಸಂಯೋಗ ಔತ್ತರೇಯ ಸಾಹಿತ್ಯದಲ್ಲೆಲ್ಲೂ ದೊ
ಯದು. ಹಿಂದಿಯಲ್ಲಂತೂ ವಿದ್ಯಾಪತಿ ಏಕಮೇವ ಶಿವಕವಿ
ಈ ಶಿವ ಗೀತಗಳನ್ನು ನಚಾರಿ ಎಂದು ಕರೆಯುತ್ತಾರೆ. ಶಿವ
ರಾತ್ರಿಯ ದಿನ ಮಿಥಿಲೆಯ ಪುರುಷರು ಯಕ್ಷಗಾನದಂತೆ ಇವುಗ
ಳನ್ನು ಹಾಡಿ ಕುಣಿಯುವುದೂ ಉಂಟು.

**ಗಂಗಾಸ್ತುತಿ :—**

ಬ್ರಹ್ಮಕಮಂಡಲು ವಾಸ ಸುವಾಸಿನಿ
ಸಾಗರ ನಾಗರ ಗೃಹಬಾಲೇ।
ಪಾಲಕ ಮಹಿಷ ವಿದಾರಣ ಕಾರಣ
ಧೃತ ಕರವಾಲ ವೀಚಿಮಾಲೇ॥
ಜಯ ಗಂಗೇ ಜಯ ಗಂಗೇ।
ಶರಣಾಗತಭಯ ಭಂಗೇ॥
ಸುರ ಮುನಿಮನುಜ ರಚಿತ ಪೂಜಾ–ಚಿತ
ಕುಸುಮ ವಿಚಿತ್ರಿತ ತೀರೇ।
ತ್ರಿನಯನ ಮೌಲಿ ಜಟಾಚಯ ಚುಂಬಿತ
ಭೂತಿ ಭೂಷಿತ ಸಿತ ನೀರೇ॥
ಹರಿಪದ ಕಮಲ ಗಲಿತ ಮಧುಸೋದರ
ಪುಣ್ಯ ಪುನೀತ ಸುರಲೋಕೇ।
ಪ್ರವಿಲಸದಮರ ಪುರೀ ಪದ ದಾನ

ವಿಧಾನ ವಿನಾಶಿತ ಶೋಕೇ॥
ಸಹಜ ದಯಾಲುತಯಾ ಪಾತಕಿಜನ
ನರಕ ವಿನಾಶನ ನಿಪುಣೇ।
ರುದ್ರಸಿಂಹ ನರಪತಿ ವರದಾಯಕ
ವಿದ್ಯಾಪತಿ ಕವಿ ಭಣಿತ ಗುಣೇ॥ *

ವಿದ್ಯಾಪತಿ ಬದುಕಿನ ಮಾದಕರೂಪವನ್ನೂ ಕಂಡಿದ್ದ. ಇದರ ಜೊತೆಗೆ ಆತ ಐಶ್ವರ್ಯ ವಿಲಾಸ ಸಾಧನಗಳು ಮಣ್ಣು ಗೂಡುತ್ತಿದ್ದುದನ್ನೂ ಕಂಡಿದ್ದ. ಆದರೆ ಅವನ ಜಗದ ಚೆಲುವಿನತ್ತ ಮುಖತಿರುಗಿಸುವ ವಿರಕ್ತ ಕವಿಯಲ್ಲ. 'ಧರ್ಮಾವಿರುದ್ಧೋ ಕಾಮೋಽಸ್ಮಿ ಭರತರ್ಷಭ' ಎನ್ನುವಂತೆ ಧರ್ಮವಿರುದ್ಧವಲ್ಲದ ಭೋಗ ಜೀವನವನ್ನು, ತುಂಬು ಜೀವನವನ್ನು ಬಾಳಿದ್ದ. 'ಯೋಗರತೋವಾ ಭೋಗರತೋವಾ' ಎನ್ನುವಂತೆ ಯೋಗ ಭೋಗಗಳೆರಡರ ಸಮನ್ವಯವನ್ನು ಅವನಲ್ಲಿ ಕಾಣಬಹುದು. ವಿದ್ಯಾಪತಿಯ ರಾಧಾಕೃಷ್ಣ ಸಂಬಂಧವಾದ ಪದಗಳಲ್ಲಿ 'ಮಧುರ ಭಕ್ತಿ'ಯ ಈಷದ್ದರ್ಶನವಾದರೆ ಶಿವ, ಪಾರ್ವತಿ, ಹರಿಹರ, ಮೊದಲಾದ ದೇವತೆಗಳ ಸ್ತುತಿಯಲ್ಲಿ ಆತನ ವೈರಾಗ್ಯ ಸಾಧನೆಯನ್ನು, ಅನನ್ಯ ದೈನ್ಯವನ್ನು ಕಾಣಬಹುದು. ಶಿವನನ್ನು ಕಂಡರೆ ಆತನಿಗೆ ಎಲ್ಲಿಲ್ಲದ ಸಲಿಗೆ. ಕುಮಾರವ್ಯಾಸನ ಕೃಷ್ಣನಂತೆ ಶಿವ ಇಲ್ಲಿ ವಿದ್ಯಾಪತಿಯ ವ್ಯಾಜನಿಂದೆ, ವ್ಯಾಜಸ್ತುತಿಗೆ ಗುರಿಯಾಗಿದ್ದಾನೆ. ಕೆಲವು ನಚಾರಿಗಳಲ್ಲಿ ಈ ಸಲಿಗೆಯ ಅಭಿವ್ಯಕ್ತಿಯನ್ನು ನಾವು ಕಾಣಬಹುದು. ಆತ ಪಂಚ

* ಅದೇ ೨೫೧

ದೇವೋಪಾಸಕನಾದ ಸ್ಮಾರ್ತ ಬ್ರಾಹ್ಮಣನೆಂದು ಹಿಂದೆಯೇ
ಹೇಳಿದೆ. ಭಕ್ತಿ ಕ್ಷೇತ್ರದಲ್ಲಿ ಹರಿಹರ ಸಮನ್ವಯ ಮಾಡಿ ಆತ
ಅತ್ಯಂತ ಮೇಲ್ಮಟ್ಟದ ಆದರ್ಶನವನ್ನು ಜನತೆಯ ಮುಂದಿಟ್ಟ
ಈ ರೀತಿ ಆತನ ಭಕ್ತಿ ಗಂಗೆಯಂತೆ ಉದಾರ, ಪಾವನ, ಅಮರ

# ಶೈಲಿ

ವಿದ್ಯಾಪತಿ ತನ್ನನ್ನು ಒಂದೆಡೆ 'ಖೇಲನಕವಿ' ಎಂದು ಹೇಳಿಕೊಂಡಿದ್ದಾನೆ. ಕಾವ್ಯ ಆತನಿಗೆ ಕ್ರೀಡೆಯಷ್ಟು ಸುಲಭ. ಭಾಷೆ ಆತನಿಗೆ ಚರಣದಾಸಿ. ವಿದ್ಯಾಪತಿ ನಾದಲೋಲ. ಆದ್ದರಿಂದಲೇ ನಾಥ ನಿಧಿಯಾದ ಜಯದೇವನಿಗೆ ಸರಿಸಮಾನನೆಂದು ಹೇಳಿ ಜನ ಆತನನ್ನು 'ಅಭಿನವ ಜಯದೇವ' ಎಂದು ಕರೆಯಿತು. ನಾದಮಾಧುರಿಯಿಂದಲೇ ಅರ್ಥಬೋಧೆ ಮಾಡುವ ಅದ್ಭುತ ಶಕ್ತಿ ಆತನ ಭಾಷೆಗೆ ಇದೆ. ಕದಂಬಕಾನನದಲ್ಲಿ ಕೊಳಲೂದುತ್ತಿರುವ ಕೃಷ್ಣನ ಚಿತ್ರವನ್ನು ನೋಡಿ :-

ನಂದಕ ನಂದನ ಕದಂಬಕ ತರುತರ
ಧಿರೇ-ಧಿರೇ ಮುರಲಿ ಬಜಾವ |
ಸಮಯ ಸಂಕೇತ ನಿಕೇತನ ಬಯಿಸಲ
ಬೇರಿ ಬೇರಿ ಬೋಲಿ ಪಠಾವ ‖ *

(ನಂದ ನಂದನ ಕದಂಬ ತರುವಿನ ತಳಗೆ ಮೆಲ್ಲ ಮೆಲ್ಲಗೆ ಮುರಳಿಯನ್ನು ಬಾರಿಸುತ್ತಿದ್ದಾನೆ. ಸಮಯಕ್ಕೆ ಸರಿಯಾಗಿ ಸಂಕೇತ ನಿಕೇತನದಲ್ಲಿ ಕುಳಿತು ಕೊಳಲೂದಿ ಊದಿ ಪ್ರೇಯಸಿಯನ್ನು ಕರೆಯುತ್ತಿದ್ದಾನೆ).

ಕವಿ ಸರಸ್ವತಿಯನ್ನು ಕುರಿತು ಬರೆದ ಒಂದು ಶ್ಲೋಕದಲ್ಲಿ

---

* ಆದೇ -೧೯

ತನ್ನ ಸಾಮರ್ಥ್ಯವನ್ನು ಪರೋಕ್ಷವಾಗಿ ಹೀಗೆ ಹೇಳಿ ಕೊಂ
ಡ್ದಾನೆ :—

" ದ್ವಾ: ಸರ್ವಾರ್ಥ ಸಮಾಗಮಸ್ಯ, ರಸನಾರಂಗಸ್ಥಲೀನರ್ತಕಿ
ತತ್ತ್ವಾವಲೋಕನ ಕಜ್ಜಲಧ್ವಜಶಿಖಾ ವೈದಗ್ಧ್ಯ ವಿಶ್ರಾಮಭೂ: !
ಶೃಂಗಾರಾದಿ ಪ್ರಸಾದಲಹರೀ ಸ್ವರ್ಲೋಕ ಕಲ್ಲೋಲಿನೀ
ಕಲ್ಪಾಂತಸ್ಥಿರ ಕೀರ್ತಿ ಸಂಭ್ರಮಸಖೀ ಸಾ ಭಾರತೀ ಪಾತುವ : ॥

"ಎಲ್ಲ ಅರ್ಥಗಳ ಬರುವಿಕೆಗೆ ಆಕೆ ದ್ವಾರಸ್ವರೂಪಳು
ಜಿಹ್ವೆಯೆಂಬ ರಂಗಸ್ಥಳದಲ್ಲಿ ಆಕೆ ನರ್ತಕಿಯಂತಿದ್ದಾಳೆ. ತತ್ತ್ವ
ದರ್ಶನಕ್ಕೆ ಆಕೆ ದೀಪಶಿಖೆಯಂತೆ, ಚಾತುರ್ಯದ ವಿಶ್ರಾಮ
ಭೂಮಿ, ಶೃಂಗಾರಾದಿ ರಸ ರೂಪಿಯಾದ ನಿರ್ಮಲತರಂಗಗಳ
ಆಕೆ ಮಂದಾಕಿನಿ. ಪ್ರಳಯದವರೆಗೂ ಸ್ಥಿರವಾಗಿರುವ ಕೀರ್ತಿಗೆ
ಅವಳು ಪ್ರಿಯಸಖಿ. ಇಂಥ ಸರಸ್ವತಿ ನಿಮ್ಮನ್ನು ಕಾಪಾಡಲಿ. "

ಸ್ವತಃ ಆತನೇ ತನ್ನ ಕವಿತೆಯನ್ನು ಕುರಿತು ' ಕೀರ್ತಿ
ಲತಾ 'ದ ಕೊನೆಯಲ್ಲಿ ಹೀಗೆ ಹೇಳಿದ್ದಾನೆ :-

" ಮಾಧುರ್ಯ ಪ್ರಸವಸ್ಥಲೀ ಗುರುಯಶೋವಿಸ್ತಾರ ಶಿಕ್ಷಾಸಖೀ।
ಯಾವದ್ವಿಶ್ವಮಿದಂಚ ಖೇಲನಕವೇರ್ವಿದ್ಯಾಪತೇರ್ಭಾರತೀ ॥

ವಿದ್ಯಾಪತಿಯ ವಾಣಿ ಮಾಧುರ್ಯದ ಜನ್ಮಭೂಮಿ,
ಮಹಾಕೀರ್ತಿಯನ್ನು ಹಬ್ಬಿಸುವುದನ್ನು ತಿಳಿಸುವುದರಲ್ಲಿ ಸಖಿ,
ಇಂಥ ವಾಣಿ ಈ ಜಗತ್ತು ಇರುವತನಕ ಇರಲಿ. ಇವೆಲ್ಲ ಬರಿಯ
ಅತಿಶಯೋಕ್ತಿಯಲ್ಲ ಸ್ವಭಾವೋಕ್ತಿ. ಆತನ ಗೇಯಪದಗಳ
ವೈಶಿಷ್ಟ್ಯ ಮಾಧುರ್ಯ ಮತ್ತು ಲಾಲಿತ್ಯ ನಿಜಕ್ಕೂ ಅವನ
ಭಾಷೆ ಸ್ವರ್ಲೋಕ ಕಲ್ಲೋಲಿನಿ. ಅವನ ಕವಿತೆ ಸೂರದಾಸನ

ಕವಿತೆಗಿಂತ ಮಧುರವಾದುದೆಂದು, ಶ್ರೀ ಜಿಂದಲ್ ಅವರು ಹೇಳಿದ್ದಾರೆ:—Indeed Vidyapati is the most musical of our poets, even more mellifluous than Sur. He has been rightly described as the Nightingale of Mitila which title he richly deserves*

ಇಷ್ಟಾದರೂ ಆತನ ಪದಗಳಲ್ಲಿ ಗಾದೆ ಮಾತುಗಳು, ಪಡೆನುಡಿಗಳುಹೇರಳವಾಗಿ ದೊರೆಯುತ್ತವೆ. ದೇಸಿಯ ಬೆಡಗು ಹಾಗೂ ಸಂಸ್ಕೃತದ ಮಾಧುರ್ಯ ಇವುಗಳ ಮಣಿಕಾಂಚನ ಸಂಯೋಗವನ್ನು ಅವನಲ್ಲಿ ಕಾಣಬಹುದು.

ಕವಿ ಸಂಪ್ರದಾಯ ಶರಣನಲ್ಲ. ಅಲಂಕಾರಕ್ಕಾಗಿ ಅಲಂಕಾರ ಬಳಸುವ ಕವಿ ಅವನಲ್ಲ. ಆತ ಬಳಸುವ ಅಲಂಕಾರಗಳಲ್ಲಿ ಏನೋ ಒಂದು ವಿಧವಾದ ಹೊಸತನವಿದೆ, ಸೊಗಸಿದೆ. ವೇಶ್ಯೆಯರು ತಮ್ಮ ಹೆಳಲುಗಳ ಮೇಲೆ ಬಿಳಿಯ ಹೂ ಮುಡಿದುಕೊಂಡಿದ್ದಾರೆ. ಅದರ ವರ್ಣನೆ ನೋಡಿ ಎಷ್ಟು ಯಥಾರ್ಥ, ಎಷ್ಟು ಸುಂದರ ! ಇದರಲ್ಲಿ ಅವನ ಗದ್ಯ ಎಷ್ಟು ಸಲೀಲವಾಗಿದೆ ಎಂಬುದನ್ನೂ ನೋಡಬಹುದು :-

" ತನ್ನಿಕೇಸ ಕುಸುಮ ವಸ, ಜನಿ ಮಾನ್ಯಜನಕ ಲಜ್ಜಾವಲಂಬಿತ ಮುಖಚಂದ್ರ ಚಂದ್ರಿಕಾ ಕರೀ ಅಧೋಗತಿ ದೇಖಿ ಅಂಧಕಾರ ಹಸ. ನಯನಾಂಚಲ ಸಂಚಾರೇ ಭ್ರೂಲತಾಭಂಗ

* K. B. Jindal: History of Hindi literature pp 100-101

ಜನಿ ಕಜ್ಜಲ ಕಲ್ಲೋಲಿಸೀ ಕರೀ ವೀಚೀವಿವರ್ತ ಬಡೀ ಬ
ಶಫರೀ ತರಂಗ. ಅತಿ ಸೂಕ್ಷ್ಮ ಸಿಂದೂರ ರೇಖಾ ನಿಂದಂ
ಪಾಪ, ಜನಿ ಪಂಚಶರಕರೋ ಪಹಿಲ ಪ್ರತಾಪ. ದೋ
ಹೀನಿ, ಮೂರ್ಝುಖೀನಿ. ರಸಿಕೇ ಆನಲಿ ಜೂಆಂ ಜೀ
ಪಯೋಧರ ಕೇ ಮರೇ ಭಾಗಏಚಹ. ನೇತ್ರಕ ರೀತಿ ತೀ
ಭಾಗೇ ತೀನು ಭುವನ ಸಾಹ. ಸಸರಂ ವಾಜ ರಾಆನ್ಹಿ ಭಾ
ಕಾಹು ಹೋಅ ಅಇಸನೋ ಆಸ ಕಇಸೇಲಾಗತ ಆಜ
ವತಾಸ *

"ಅವರು ಹೆಳಲ ಮೇಲೆ ಹೂ ಮುಡಿದಿದ್ದರು. ಅದ
ಮಾನ್ಯ ಜನರು ಲಜ್ಜೆಯಿಂದ ತಗ್ಗಿಸಿದ ಮುಖಚಂದ್ರನ ಚಂದ್ರ
ಕೆಯ ಅಧೋಗತಿಯನ್ನು ಕಂಡು ಅಂಧಕಾರ ನಗುತ್ತಿದೆಯೋ
ಎನ್ನುವಂತಿತ್ತು. ಅವರ ನಯನಾಂಚಲ ಸಂಚಾರದಿಂ
ಭ್ರೂಲತೆಗಳು ಭಂಗಗೊಳ್ಳುತ್ತಿದ್ದವು. ಅದು ಕಾಡಿಗೆಯ
ಹೊಳೆಯ ಸುಳಿಯಲ್ಲಿ ದೊಡ್ಡ ಮೀನುಗಳು ಸಿಕ್ಕಿಕೊಂಡು
ತೊಳಲುತ್ತಿರುವಂತೆ ಕಾಣುತ್ತಿತ್ತು. ಪಾಪವನ್ನು ನಿಂದಿಸುವ
ಕುಂಕುಮದ ರೇಖೆ ಕಾಮದೇವನ ಪ್ರಥಮ ಪ್ರತಾಪದಂತೆ
ತುಂಬ ಸೂಕ್ಷ್ಮವಾಗಿತ್ತು. ಅವರ ದೋಷಹೀನ ಬಡನಡು ರಸಿಕ
ರನ್ನು ಜೂಜಿನಲ್ಲಿ ಸೋಲಿಸಿ ಅವರಿಂದ ಕಸಿದು ಕೊಂಡಿರುವಂತೆ
ಕಂಡಿತು. ಅದು ಪಯೋಧರಗಳ ಭಾರವನ್ನು ತಡೆಯಲಾರದೆ
ಓಡಲೆಳೆಸುತ್ತಿದೆ. ಅವರ ಕಣ್ಣು ತನ್ನ ಮೂರು ಭಾಗಗಳಿಂದ

* ಕೀರ್ತಿಲತಾ ಪು. ೩೬

(ಕಪ್ಪು. ಕೆಂಪು, ಬಿಳುಪು) ತಾನು ತ್ರಿಲೋಕದ ಒಡೆಯನೆಂದು ಕೊಳ್ಳುತಿತ್ತು. ಈ ನೇತ್ರ ರಾಜರ ಶೃಂಗಾರ ಚೆನ್ನಾಗಿ ನಡೆದಿತ್ತು ಈ ಲಲನೆಯರ ಸೆರಗಿನ ಗಾಳಿ ತಮ್ಮತ್ತ ಎಂದು ಬೀಸೀತು ಎಂದು ಕೆಲವರು ತಹತಹಿಸುತ್ತಿದ್ದರು."

ವಿದ್ಯಾಪತಿಯ ಭಾಷೆ ಮಾತ್ರವಲ್ಲ ಛಂದಸ್ಸೂ ಭಾವಾನು ಕೂಲ. ಶೋಕ, ನಿಟ್ಟುಸಿರನ್ನು ವರ್ಣಿಸುವಾಗ ಕವಿ ದೇಸಿ ಯಲ್ಲಿ ಚಿಕ್ಕ ಚಿಕ್ಕ ಪದಗಳನ್ನು ಬರೆಯುತ್ತಾನೆ. ಅಭಿರಾಮ ಯೌವನವನ್ನು ವರ್ಣಿಸುವಾಗ ಚರಣ ಉದ್ದವಾಗುತ್ತದೆ, ಶಬ್ದ ಮಾಂಸಲವಾಗುತ್ತದೆ, ಅಲಂಕಾರಗಳೂ ಇಣಕಿ ಮಿಣುಕುತ್ತವೆ. ವಿದ್ಯಾಪತಿ ಮಿತ ಭಾಷಿ, "ಹತ್ತು ಕಟ್ಟುವ ಕಡೆ ಒಂದು ಮುತ್ತು ಕಟ್ಟು" ಎನ್ನುವ ಮನೋಧರ್ಮ ಅವನದು. ಸೌಭಾಗ್ಯ ಮತ್ತು ಅನುರಾಗ ಇವುಗಳ ಅಂತರವನ್ನು ಇಷ್ಟು ಚಿಕ್ಕದಾಗಿ ಎಷ್ಟು ಚೊಕ್ಕವಾಗಿ ಹೇಳಿದ್ದಾನೆ ಎಂಬುದನ್ನು ಇಲ್ಲಿ ನೋಡಬಹುದು:-

ತೇಲ ಬಿಂದು ಜೈಸೇ ಪಾನೀಪಸಾರಿಏ
ಐಸನ ಮೋರ ಅನುರಾಗ।
ಸಿಕತಾ ಜಲ ಜೈಸೇ ಛನಹಿ ಸೂಖಿಏ
ತೈಸನ ಮೋರ ಸುಹಾಗ॥

(ನೀರಿಗೆ ಬಿದ್ದ ಎಣ್ಣೆಯಂತೆ ಪ್ರಸರಣ ಶೀಲ ನನ್ನ ಅನು ರಾಗ, ಮರಳಿಗೆ ಬಿದ್ದ ನೀರಿನಂತೆ ಅಲ್ಪ ನನ್ನ ಸೌಭಾಗ್ಯ.)

ವಿದ್ಯಾಪತಿ ಮಧ್ಯಯುಗದ ಸಂಸ್ಕೃತ ಕವಿ ಶ್ರೀಹರ್ಷ ನಂತೆ ನ್ಯಾಯಶಾಸ್ತ್ರದ ಕಠೋರ ಪಥದ ಮೇಲೂ ಸಂಚರಿಸಬಲ್ಲ, ಪ್ರೇಮದ ಹೂವು ಚೆಲ್ಲಿದ ಹಾದಿಯಲ್ಲೂ ನಡೆಯಬಲ್ಲ. ಆದರೆ

'ಪ್ರಸಾದಗುಣ' ದಲ್ಲಿ ಶ್ರೀಹರ್ಷನಿಗೂ ವಿದ್ಯಾಪತಿಗೂ ಆಕಾಶ ಪಾತಾಳಗಳ ಅಂತರ. ಅವನ ಭಾಷೆ ಭಾವಾನುಕೂಲವಾಗಿದೆ. ಒಮ್ಮೆ ಅದು ಗಿರಿನಿರ್ಝರಿಣಿಯಾಗಿ ಭೋರ್ಗರೆದರೆ ಒಮ್ಮೆ ಗಿಣಿಯಂತೆ ಮಂಜುಳಗಾನ ಮಾಡುತ್ತ ಲೀಲೆಯಿಂದ ಶರತ್ತರಂ ಚಲಿಸಬಲ್ಲದು. ಆತ ಬರೆದ ಕಾವ್ಯ ಪ್ರಧಾನವಾಗಿ ಕೃಷ್ಣ ಕಾವ್ಯ. ಆತನ ಕಾವ್ಯ ಕೃಷ್ಣನಂತೆ ತ್ರಿಭಂಗಿಯುಳ್ಳುದು. ಶೃಂಗಾರ, ಭಕ್ತಿ, ವೀರಗಳ ತ್ರಿಭಂಗಿ ಒಂದೆಡೆ ಕಂಡು ಬಂದರೆ ಮಾಧುರ್ಯ ಪ್ರಸಾದ ಮತ್ತು ಓಜೋಗುಣಗಳ ತ್ರಿವೇಣಿಯನ್ನು ಶೈಲಿಯಲ್ಲಿ ಕಾಣಬಹುದು. ಈ ರೀತಿ ಆತ ಕಾವ್ಯದ ಎಲ್ಲ ಶೈಲಿಯಲ್ಲೂ ಸವ್ಯಸಾಚಿ. ತನ್ನ ಭಾಷೆಯನ್ನು ಕುರಿತು ಆತನ ಈ ಗರ್ವೋಕ್ತಿ ಬರಿಯ ಗರ್ವೋಕ್ತಿಯಲ್ಲ. ಸತ್ಯಕಥನ :-

ಬಾಲ ಚಂದ ವಿಜ್ಜಾವ ಇಭಾಸಾ, ಡುಹುನ ಲಗ್ಗ ಇ ದುಜ್ಜನ ಹಾಸಾ|
ಓ ಪರಮೇಸರಹರ ಶಿರಸೋಹಇ ಈಣಿಚ್ಚಇ ನಾಅರ ಮನ,
ಮೋಹಇ*

ಬಾಲಚಂದ್ರ ಮತ್ತು ವಿದ್ಯಾಪತಿಯಭಾಷೆ ಈ ಎರಡಕ್ಕೂ ದುರ್ಜನರ ಅಪಹಾಸ್ಯ ತಟ್ಟದು. ಚಂದ್ರ ಪರಮೇಶ್ವರ ಹರನ ಶಿರದಲ್ಲಿ ಶೋಭಿಸುತ್ತಾನೆ. ವಿದ್ಯಾಪತಿಯ ಭಾಷೆ ನಿತ್ಯವೂ ಸಹೃದಯರ ಮನವನ್ನು ಮೋಹಿಸುತ್ತದೆ.

ಸಂಗೀತ ಮತ್ತು ಸಾಹಿತ್ಯ ಇವೆರಡರ ಹೃದಯಂಗಮ ಸಂಗಮ ವಿದ್ಯಾಪತಿಯ ಪದಗಳ ವೈಶಿಷ್ಯ. ಅವು ಯಾವ ಒಂದು ನಿಶ್ಚಿತ ಛಂದಸ್ಸಿನಲ್ಲೂ ರಚಿತವಾಗದೆ ದಾಸರ ಪದಗಳಂತೆ ರಾಗ

*ಕೀರ್ತಿಲತಾ. ಪುಟ ೪.

ತಾಳದ ದೃಷ್ಟಿಯಿಂದ ಬರೆದುವಾಗಿವೆ. ಈ ಕಾರಣದಿಂದಲೋ ಏನೋ ವಿದ್ಯಾಪತಿಯ ಪದಗಳು ಮಿಥಿಲೆಯ ಜನತೆಯ ಕಂಠದಲ್ಲಿ ನೆಲೆಸಿಬಿಟ್ಟವೆ. ಆತನ ಈ ಪದಗಳು ಲೋಕ ಗೀತಗಳಿಗೆ ಎಷ್ಟು ನಿಕಟವಾಗಿವೆಯೆಂದರೆ ಅವು ಲೋಕ ಗೀತದಂತೆ ಜನರ ನಾಲಿಗೆಯ ಮೇಲೆ ನರ್ತಿಸುತ್ತಿವೆ. ಅಷ್ಟೇ ಅಲ್ಲ ಹಲವು ಲೋಕ ಗೀತೆಗಳೂ ವಿದ್ಯಾಪತಿಯ ಪದಸಮೂಹದಲ್ಲಿ ಬೆರೆತುಕೊಂಡುದುಂಟು. ಇದಕ್ಕಿಂತ ಆತನ ಜನಪ್ರಿಯತೆಗೆ ಬೇರೇನು ಸಾಕ್ಷಿ ಬೇಕು?

ಪದಗಳ ಬಳಕೆಯಲ್ಲಂತೂ ವಿದ್ಯಾಪತಿ ಪಟು. ಯಾವ ಸಂದರ್ಭದಲ್ಲಿ ಯಾವ ಪದವನ್ನು ಬಳಸಬೇಕು ಎಂಬುದನ್ನು ಅವನು ತುಂಬ ಚೆನ್ನಾಗಿ ಅರಿತಿದ್ದ. ಪ್ರತಿಯೊಂದು ಪದದ ಎದೆಯ ತುಡಿತವನ್ನೂ ಆತ ಆಲಿಸಬಲ್ಲವನಾಗಿದ್ದ. ಶೃಂಗಾರ ಪ್ರಸಂಗದಲ್ಲಿ ಕೃಷ್ಣನಿಗೆ 'ಮಾಧವ' ಎಂಬ ಹೆಸರನ್ನೇ ವಿಶೇಷವಾಗಿ ಬಳಸಿದ್ದಾನೆ. ಭಕ್ತಿ ಪ್ರಸಂಗದಲ್ಲಿ 'ಹರಿ' ಶಬ್ದಕ್ಕೆ ಹೆಚ್ಚು ಪ್ರಾಶಸ್ತ್ಯ. ಶಿವನನ್ನು ನಿಂದಿಸುವಾಗ 'ಭೋಲಾನಾಥ' (ಪೆಚ್ಚರೊಡೆಯ, ಪೆಚ್ಚ) ಅಭಯ ನೀಡುವಾಗ ಅವನು 'ಶೂಲಪಾಣಿ'.

ವಿದ್ಯಾಪತಿಯ ಭಾಷೆಯಲ್ಲಿ ಉತ್ಸಾಹ ಸೂಚಕವಾದ 'ರೇ' 'ಆರೇ' ಮೊದಲಾದ ನಿಪಾತಗಳು ಅತ್ಯಂತ ಅರ್ಥಗರ್ಭಿತವಾಗಿ ಬಂದು ಭಾವ ತೀವ್ರತೆಯನ್ನು ಹೆಚ್ಚಿಸುತ್ತವೆ. ಭಾಷೆಯ ಮೇಲಿನ ಈ ಹಿಡಿತ, ಈ ಲೀಲೆ ಅಸದೃಶವಾದುದು.

# ಪ್ರಶಸ್ತಿ

ವಿದ್ಯಾಪತಿ ಹಿಂದಿನ ಕವಿಗಳಿಗೆ ಋಣಿಯಾಗಿರುವಂತೆ ಮುಂದಿನ ಕವಿಗಳಿಗೆ ಗಣಿಯಾಗಿಯೂ ಇದ್ದಾನೆ. ಮೈಥಿಲಿಯಲ್ಲಿ ಪ್ರೇಮ ಗೀತೆಯನ್ನು ಹಾಡಿದ ಮೊದಲ ಕವಿ ವಿದ್ಯಾಪತಿ. ಆದ್ದರಿಂದ ಮುಂದೆ ಬಂದ ಸೂರದಾಸನೇ ಮೊದಲಾದ ಹಿಂದಿಯ ಕವಿಗಳು ಈತನಿಂದ ಭಾವ ಭಾಷೆಗಳನ್ನು ಎರವಲಾಗಿ ತೆಗೆದು ಕೊಂಡರು. ಕೆಲವು ಕಡೆಯಂತೂ ಸೂರದಾಸರು ವಿದ್ಯಾಪತಿಯ ಪದಗಳನ್ನು ಭಾವಗಳನ್ನು ಹಾಗೆ ಹಾಗೆಯೇ ತನ್ನಲ್ಲಿ ಸೇರಿಸಿ ಕೊಂಡಿದ್ದಾರೆ. ವಿದ್ಯಾಪತಿಯ ಹರಿಹರ ಸಮನ್ವಯವನ್ನು ತುಳಸೀದಾಸರೂ ಅನುಸರಿಸಿದ್ದಾರೆ. ಬಂಗಾಳಿಯ ಕವಿಗಳ ಮೇಲಂತೂ ವಿದ್ಯಾಪತಿಯ ಪ್ರಭಾವ ಅಷ್ಟಿಷ್ಟಲ್ಲ. ಇವೆಲ್ಲ ವಿದ್ಯಾಪತಿಯ ಜನಪ್ರಿಯತೆಗೆ ಸಾಕ್ಷಿ. ಆದರೆ ಹಿಂದಿಯಲ್ಲಿ ಪೂರ್ವಕವಿಸ್ಮರಣೆ ಬೆಳೆದು ಬರಲಿಲ್ಲವಾದ್ದರಿಂದ ವಿದ್ಯಾಪತಿಯನ್ನು ತರುವಾಯದ ಕವಿಗಳಾರೂಸ್ಮರಿಸಿಲ್ಲ ಆತನ ಋಣವನ್ನು ನೆನೆದಿಲ್ಲ! ತುಳಸೀದಾಸರಂತಹ ಪೂರ್ಣ ಭಕ್ತರನ್ನೇ ಸ್ಮರಿಸಿಲ್ಲವೆಂದರೆ ವಿದ್ಯಾಪತಿಯನ್ನು ಕೇಳುವರಾರು?

ಆದರೆ ವಿದ್ಯಾಪತಿಯ ಕವಿತೆಯನ್ನು ಆಧುನಿಕ ವಿದ್ವಾಂಸರು ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ. ಆನಂದ ಕುಮಾರ ಸ್ವಾಮಿಯವರು ತಮ್ಮ 'ಸಾಂಗ್ಸ ಆಫ್ ವಿದ್ಯಾಪತಿ' ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ. "Vidyapati is

roses, roses all the wany, is a Bower of bliss. There we have the earthly paradise as it were of an Indian William Morris. Jamuna bank in Vaishnava literature stands for this world regarded as the constant meeting place of Radha and Krishna where amidst the affairs of daily life the soul is arrested, beguiled to her undoing. In the flute of krishna there is a call of infinite."

'ವಿದ್ಯಾಪತಿ ಬರಿಯಗುಲಾಬಿ, ಉದ್ದಕ್ಕೂ ಗುಲಾಬಿ, ಒಂದು ಆನಂದ ಕುಂಜ. ಅಲ್ಲಿ ಪಾರ್ಥಿವ ಸ್ವರ್ಗವನ್ನೇ ಕಾಣಬಹುದು. ವೈಷ್ಣವ ಸಾಹಿತ್ಯದಲ್ಲಿ ಯಮುನಾತೀರ ಈ ಲೋಕದ ಪ್ರತೀಕ ಅದು ರಾಧಾಕೃಷ್ಣರ ಸಂತತ ಮಿಲನಭೂಮಿ. ಅಲ್ಲಿ ನಮ್ಮ ಬದುಕಿನ ಜಂಜಡದ ನಡುವೆ ನಮ್ಮ ಆತ್ಮ ತನ್ನ ಪಾಪ ಕ್ಲೇಶವನ್ನೆಲ್ಲ ಮರೆತು ದೈವೋನ್ಮುಖವಾಗುತ್ತದೆ. ಕೃಷ್ಣನ ಕೊಳಲಿನಲ್ಲಿ ಅನಂತದ ಕರೆ ಇದೆ.

'Vidyapati and his contemporaries' ಎಂಬ ಗ್ರಂಥದಲ್ಲಿ ಗ್ರಿಯರ್ಸನ್ ಎಂಬ ಪಾಶ್ಚಾತ್ಯ ವಿದ್ವಾಂಸ ಹೀಗೆ ಹೇಳುತ್ತಾನೆ, "Even when the sun of Hindu religion is set, when belief and faith in Krishna and in that medicine

of 'disease of existence' the hymns of Krishna's love is extinct, still the love born songs of Vidyapati in which he tells of Krishna and Radha, will never be diminished."

"ಹಿಂದೂ ಧರ್ಮದ ಸೂರ್ಯ ಮುಳುಗಿ ಹೋಗಬಹುದು, ಕೃಷ್ಣನಲ್ಲಿ ಶ್ರದ್ಧೆ ಅಳಿದು ಹೋಗಬಹುದು, ಭವರೋಗದ ಔಷಧಿಯಾದ ಕೃಷ್ಣನ ಸ್ತುತಿಗಳೂ ಕಣ್ಮರೆಯಾಗಬಹುದು, ಆದರೆ ರಾಧಾಕೃಷ್ಣರ ಲೀಲಾಗಾನವಿರುವ ವಿದ್ಯಾಪತಿಯ ಪದಗಳು ಮಾತ್ರ ಎಂದೆಂದಿಗೂ ಅಳಿಯವು."

ಇದೇ ಗ್ರಿಯರ್ಸನ್ ಮತ್ತೊಂದು ಕಡೆ ಹೀಗೆ ಹೇಳುತ್ತಾನೆ: "ಕ್ರೈಸ್ತ ಪಾದರಿಗಳು ಸಾಲೋಮನ್‌ನ ಹಾಡುಗಳನ್ನು ಎಷ್ಟು ನಿಷ್ಠೆಯಿಂದ ಓದುತ್ತಾರೆ ಅಷ್ಟೇ ನಿಷ್ಠೆಯಿಂದ ಹಿಂದೂ ಭಕ್ತರು ವಿದ್ಯಾಪತಿಯ ಪದಗಳನ್ನು ಹಾಡುತ್ತಾರೆ.

'ಮಧ್ಯಯುಗದ ವೈಷ್ಣವ ಸಾಹಿತ್ಯ' ಎಂಬ ಗ್ರಂಥದಲ್ಲಿ ದಿನೇಶಚಂದ್ರಸೇನರು ವಿದ್ಯಾಪತಿ ಮತ್ತು ಚಂಡೀದಾಸ ಇವರಿಬ್ಬರನ್ನೂ ಹೋಲಿಸುತ್ತ ಹೀಗೆ ಹೇಳಿದ್ದಾರೆ: "Chandidas is a bird from the higher regions where earthly beauties may be scant, but which is nearer heaven for all that. Vidyapati moves all day in the sunny groves and

floral meadows of the earth, but in the evening rises high and overtalkes his fellow poet."

"ಚಂಡೀದಾಸ ಉರ್ಧ್ವಲೋಕದ ಪಕ್ಷಿ. ಅಲ್ಲಿ ನೆಲದ ಚೆಲುವು ಅಲ್ಪವಿರಬಹುದು ಆದರೆ ಅದು ಸ್ವರ್ಗಕ್ಕೆ ಸಮೀಪ ವಾದುದು. ವಿದ್ಯಾಪತಿ ದಿನವೆಲ್ಲ ನೆಲದ ಬಿಸಿಲಿನಲ್ಲಿ, ತೋಪಿನಲ್ಲಿ, ಕುಸುಮಿತ ಕಾನನದಲ್ಲಿ, ಹುಲ್ಲುಗಾವಲಿನಲ್ಲಿ ಅಲೆಯುತ್ತಾನೆ. ಆದರೆ ಸಂಜೆಯ ಹೊತ್ತಿಗೆ ಊರ್ಧ್ವಸಂಚರಣಕ್ಕೆ ತೊಡಗುತ್ತಾನೆ. ಕೊನೆಗೆ ತನ್ನ ಸಹ ಕವಿಯನ್ನೂ ಹಿಂದೆ ಹಾಕುತ್ತಾನೆ."

ಸೇನರ ಮಾತು ವಿದ್ಯಾಪತಿಯ ರಾಗರತಿ ಮತ್ತು ವೀತರಾಗ ರಸಿಕತೆಯನ್ನು ತೆರೆದು ತೋರಿಸುತ್ತದೆ. ಕನ್ನಡದ ರತ್ನಾಕರನಂತೆ ವಿದ್ಯಾಪತಿ ಪ್ರಧಾನತ: ಶೃಂಗಾರ ಕವಿಯಾದರೂ ಅವನ ದೃಷ್ಟಿ ವೈರಾಗ್ಯದತ್ತಲೇ ಕಮಲ ಕೆಸರಿನಲ್ಲೇ ಇದ್ದರೂ ಅದರ ಮುಖ ಮಾತ್ರ ಸೂರ್ಯನತ್ತ. ಈ ರೀತಿ ಮರ್ತ್ಯದ ನೆಲದ ಮೇಲೇ ನಿಂತು ಅಮರ್ತ್ಯದ ಆಗಸದತ್ತ ಕೈಚಾಚುವ ಕವಿ ವಿದ್ಯಾಪತಿ. ಗ್ರಿಯರ್ಸನ್ನನ ಮಾತನ್ನು ನೋಡಿದರೆ 'ಕಲ್ಪಾಂತರ ಸ್ಥಿರ ಕೀರ್ತಿ ಸಂಭ್ರಮಸಖೀ' ಎಂದು ತನ್ನ ವಾಣಿಯ ಬಗೆಗೆ ಹೇಳಿಕೊಂಡಿರುವ ಮಾತಿನ ಸತ್ಯತೆ ವೇದ್ಯವಾಗುತ್ತದೆ. ಕವಿಗೆ ಸಾವಿಲ್ಲ. ಅವನು ತನ್ನ ಕೃತಿಗಳ ಮೂಲಕ ಕಲ್ಪಾಂತರ ಸ್ಥಾಯಿ.

# ಗ್ರಂಥಋಣ

೧–ವಿದ್ಯಾಪತಿ ಕೀ ಪದಾವಲಿ–ಸಂಪಾದಕ :– ರಾಮವೃಕ್ಷ ಬೇನೀಪುರಿ

೨–ವಿದ್ಯಾಪತಿ ಕೀ ಪದಾದಲಿ–ಬಿಹಾರ್ ರಾಷ್ಟ್ರಭಾಷಾ ಪರಿಷತ್, ಪಾಟ್ನಾ.

೩–ಕೀರ್ತಿಲತಾ–ಸಂ. ಡಾ. ಬಾಬೂರಾಮ ಸಕ್ಸೇನಾ

೪–ವಿದ್ಯಾಪತಿ–ಡಾ. ಉಮೇಶ ಮಿಶ್ರ.

೫–ವಿದ್ಯಾಪತಿ–ಡಾ. ರಾಮರತನ ಭಟ್ನಾಗರ್

೬–ವಿದ್ಯಾಪತಿ–ಡಾ. ಶಿವಪ್ರಸಾದಸಿಂಹ.

೧೦–ಹಿಂದಿ ಸಾಹಿತ್ಯ–ಡಾ. ಹಜಾರೀ ಪ್ರಸಾದ್ ದ್ವಿವೇದಿ.

೧೧–ಹಿಂದೀ ಸಾಹಿತ್ಯ ಕಾ ಇತಿಹಾಸ್–ರಾಮಚಂದ್ರ ಶುಕ್ಲ.

೧೨–ವಿದ್ಯಾಪತಿ–ಜಯನಾಥ ನಲಿನ್